ಸತ್ಯಾತ್ಮಸುಧಾ - 18

# ಪುಷ್ಪಹಾಸ



* ಸಂಗ್ರಹ : ಡಾ॥ ಕಾಂತೇಶಾಚಾರ್ಯ ಕದರಮಂಡಲಗಿ *

ಪ್ರಕಾಶಕರು : ವಿಶ್ವಮಧ್ವಮಹಾಪರಿಷತ್, ಶ್ರೀ ಉತ್ತರಾದಿಮಠ, ಬೆಂಗಳೂರು-೪

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 152

# ಪುಷ್ಪಹಾಸ

(ಪುಷ್ಪಸಮರ್ಪಣೆಕಾಲದಲ್ಲಿ ಮಾಡಬೇಕಾದ ಅನುಸಂಧಾನಗಳು)

ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಪ್ರವಚನಮಾಲಿಕೆ

ಸಂಗ್ರಹ

ಡಾ. ಕಾಂತೇಶಾಚಾರ್ಯ ಕದರಮಂಡಲಗಿ

... ಪ್ರಕಾಶನ ...

ವಿಶ್ವಮಧ್ವಮಹಾಪರಿಷತ್
ಉತ್ತರಾದಿಮಠ, ಶ್ರೀಜಯತೀರ್ಥ ವಿದ್ಯಾಪೀಠ
ಬಸವನಗುಡಿ ಬೆಂಗಳೂರು - 4

**Pushpahasa – A Collection of Lectures**

**by Sri Sri 1008 Sri Satyatmateertha Swamiji.**

Compiled by- Dr.K.Kantheshacharya Kadaramandalgi

Published by - Vishwa Madhwa Mahaparishat

Copies : 1000

**First Edition : November 2015**

No.of Pages : **80.00**



**Price : 20**

Copies can be had from :

**Vishva Madhwa Maha Parishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
Phone : 080 26603692. vmmp05@gmail.com

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

ಮುಖಪುಟವಿನ್ಯಾಸ : ಗೋಪಾಲಕೃಷ್ಣ ದಾವಣಗೇರಿ

Printed by : VAGARTHA BANGALORE -19 PHONE : 22427677

॥ ಶ್ರೀದಿಗ್ವಿಜಯರಾಮೋವಿಜಯತೇ ॥

# ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶರಾದ

## ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ಅನುಗ್ರಹಸಂದೇಶ

'ನಗು' ಇದು ಮನದ ಪ್ರಸನ್ನತೆಯನ್ನು ತಿಳಿಸುತ್ತದೆ. ಸದಾ ಸ್ವಾಭಾವಿಕವಾಗಿ ನಗುವವ ಸದಾ ಪ್ರಸನ್ನಚಿತ್ತನಾಗಿರುತ್ತಾನೆ. ಸದಾ ಸಂತೋಷದಿಂದ ಇರುತ್ತಾನೆ. ಭಗವಂತನಿಗೆ ಎಂದಿಗೂ ಖೇದ ಇಲ್ಲ. ಸದಾ ಸುಖೀ. ಸರ್ವದಾ ಪ್ರಸನ್ನಚಿತ್ತ. ಸಮಸ್ತ ಜಗತ್ತಿನ ಎಲ್ಲ ವ್ಯಾಪಾರಗಳನ್ನು ಸದಾ ಮಾಡುತ್ತಿದ್ದರೂ, ಅನಂತಾನಂತ ಜೀವರಾಶಿಗಳನ್ನು ನಿಯಮನ ಮಾಡುತ್ತಿದ್ದರೂ ಅವನಿಗೆ ಖೇದ ಇಲ್ಲ, ಆಯಾಸ ಇಲ್ಲ. ಅವನ ಮುಖದಲ್ಲಿ ಎಂದಿಗೂ ಆಯಾಸದ ಕುರುಹು ಕಾಣುವುದಿಲ್ಲ. ಅವನು ಸದಾ ಹಸನ್ಮುಖಿಯಾಗಿಯೇ ಇರುವ. ಅವನ ಮಂದಹಾಸಕ್ಕೆ ಸಂಕೇತ ಹೂಗಳು. ಅರಳಿದ ಹೂಗಳು ಭಗವಂತನ ನಗುವನ್ನು ಪ್ರತಿನಿಧಿಸುತ್ತವೆ. ಭಗವಂತ ತನ್ನ ನಗುವನ್ನು ಹೂಗಳ ಮೂಲಕ ತೋರಿಸುತ್ತಾನೆ. ಅಂತೆಯೇ ಅವನು ಪುಷ್ಪಹಾಸ. ಅವನ ಹೂನಗೆ ನಮ್ಮೆಲ್ಲರ ಶೋಕಸಾಗರವನ್ನು ಒಣಗಿಸುತ್ತದೆ. ಅರಳಿದ ಹೂಗಳನ್ನು ಕಂಡಾಗ ಭಗವಂತನ ನಗುಮುಖದ ನೆನಪಾಗಬೇಕು ನಮಗೆ. ಅವನ ನಗುಮೊಗವನ್ನು ನೆನೆಯುತ್ತಾ ನಮ್ಮ ನೋವುಗಳನ್ನೆಲ್ಲಾ ಮರೆಯಬೇಕು. ಅದಕ್ಕಾಗಿಯೇ ಪುಷ್ಪಗಳನ್ನು ಪುಷ್ಪಹಾಸನಿಗೆ ಸಮರ್ಪಿಸಬೇಕು.

ಈ ನಿಟ್ಟಿನಲ್ಲಿ ಗುರುಗಳ ಅನುಗ್ರಹದಿಂದ ವಿಷ್ಣುಸಹಸ್ರನಾಮ-ದಲ್ಲಿ ಬರುವ ''ಪುಷ್ಪಾಹಾಸ'' ಎಂಬ ಶಬ್ದದ ಅರ್ಥವಿವರಣೆಯನ್ನು, ಪುಷ್ಪಾರ್ಚನೆಯ ಹಿಂದಿರುವ ಆಧ್ಯಾತ್ಮಿಕತತ್ತ್ವಗಳನ್ನು ಹಾಗೂ ಅನುಸಂಧಾನಗಳನ್ನು ನಮ್ಮ ಉಪನ್ಯಾಸಗಳಲ್ಲಿ ಯಥಾಮತಿಯಾಗಿ ತಿಳಿಸುವ ಪ್ರಯತ್ನವನ್ನು ಮಾಡಿದ್ದೇವೆ.

ಗುರುಗಳು, ವೇದವ್ಯಾಸದೇವರು ನಮ್ಮಲ್ಲಿ ನಿಂತು ನುಡಿಸಿದ ಈ ತತ್ತ್ವಗಳನ್ನು ಜಿಜ್ಞಾಸುಗಳ ಅನುಕೂಲಕ್ಕಾಗಿ ನಮ್ಮ ಪ್ರಿಯಶಿಷ್ಯನಾದ ಪಂ. ಕಾಂತೇಶಾಚಾರ್ಯನು ಬಹಳ ಸುಂದರವಾಗಿ ಸಂಗ್ರಹಿಸಿದ್ದಾನೆ. ಇದಲ್ಲದೇ ಪುಷ್ಪಾರ್ಚನೆಯ ಕ್ರಮವನ್ನೂ ತಿಳಿಸಿಕೊಟ್ಟಿದ್ದಾನೆ. ಚಿಕ್ಕವಯಸ್ಸಿನಿಂದಲೂ ವಿಶಿಷ್ಟವಾದ ಶಿಸ್ತಿನ ಕ್ರಮದಲ್ಲಿ ಗ್ರಂಥಲೇಖನ, ಸಂಗ್ರಹ, ಅನುವಾದ ಮೊದಲಾದ ಕಲೆಯನ್ನು ಮೈಗೂಡಿಸಿಕೊಂಡು ಶ್ರೀವೇದವ್ಯಾಸದೇವರ, ಶ್ರೀಮದಾಚಾರ್ಯರ ಸೇವೆಯನ್ನು ಮಾಡುತ್ತಿರುವುದು ನಮಗೆ ವಿಶೇಷ ಸಂತೋಷವನ್ನು ಉಂಟು-ಮಾಡಿದೆ. ಇದೇ ರೀತಿಯ ತತ್ತ್ವಪ್ರಸಾರಕಾರ್ಯವು ನಿರಂತರವಾಗಿ ಕಾಂತೇಶಾಚಾರ್ಯನಿಂದ ನಡೆಯಲಿ ಎಂದು ನಮ್ಮ ಉಪಾಸ್ಯಮೂರ್ತಿ ಶ್ರೀಮೂಲರಾಮ-ದಿಗ್ವಿಜಯರಾಮ-ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು**

**ಉತ್ತರಾದಿಮಠ**



# ಆಶೀರ್ವಚನ

ಶ್ರೀ ವೆಂಕಟರಾವ್ ಸೇಡಂಬಿ ಅವರು ಶ್ರೀಮಠದ ವಿಶೇಷ ಸೇವೆಯನ್ನು ನಿರ್ವ್ಯಾಜವಾಗಿ ಮಾಡುತ್ತಲಿದ್ದಾರೆ. ಇದರಂತೆ ಅವರ ಮಗನಾದ ದಿ || ಗುರುರಾಜ ಸೇಡಂಬಿ ಅತ್ಯಂತ ಉತ್ಸಾಹದಿಂದ ಶ್ರೀಮಠದಿಂದ ನಡೆಯುವ ಅನೇಕ ಸಾಮಾಜಿಕ ಕಾರ್ಯಗಳಲ್ಲಿ ವಿಶೇಷ ನೇತೃತ್ವವನ್ನು ವಹಿಸಿ ಕಾರ್ಯ ನಿರ್ವಹಿಸುತ್ತಿದ್ದನು. ಅವನ ಸ್ಮರಣಾರ್ಥ ಶ್ರೀಮತಿ ಪ್ರಮಿಳಾ, ಶ್ರೀ ವೆಂಕಟರಾವ್ ಸೇಡಂಬಿ ಇವರು ''ಪುಷ್ಪಹಾಸ'' ಎಂಬ ಈ ಹೊತ್ತಿಗೆಯ ಪ್ರಕಾಶನದ ಸಮಗ್ರ ವೆಚ್ಚವನ್ನು ಭರಿಸಿದ್ದಾರೆ. ಈ ಮೂಲಕ ಶ್ರೀವೇದವ್ಯಾಸದೇವರ ಹಾಗೂ ಶ್ರೀಮದಾಚಾರ್ಯರ ಉತ್ತಮಸೇವೆಯನ್ನು ಮಾಡಿದ್ದಾರೆ.

ಇವರಿಗೆ ಹಾಗೂ ಇವರ ಕುಟುಂಬದವರಿಗೆ ಭಗವಂತ ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು, ಆಚಾರ್ಯರ ಶಾಸ್ತ್ರವನ್ನು ಓದುವ ಸೌಭಾಗ್ಯ-ಆಸಕ್ತಿಯನ್ನು ನೀಡಿ ಅನುಗ್ರಹಿಸಲಿ ಎಂದು ಅಸ್ಮದುಪಾಸ್ಯಮೂರ್ತಿಗಳಾದ ಶ್ರೀಮೂಲರಾಮ-ದಿಗ್ವಿಜಯರಾಮ-ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು**

**ಉತ್ತರಾದಿಮಠ**

# ವಿಷಯಾನುಕ್ರಮಣಿಕಾ



★★★

# ಇಣಕು ನೋಟ

**ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕಮಂಡಲೇ ।**

ವೇದ-ತಂತ್ರಸಾರೋಕ್ತಕ್ರಮದಲ್ಲಿ ಪ್ರತಿನಿತ್ಯ ದೇವಪೂಜೆಯನ್ನು ತಪ್ಪದೇ ಮಾಡಬೇಕು. ಇದು ಎಲ್ಲರಿಗೂ ಅನ್ವಯವಾಗುವ ಕಡ್ಡಾಯನಿಯಮ. ಯಾವುದೇ ವಸ್ತುವನ್ನು ನಾವು ಉಪಯೋಗಿಸುವಾಗ ಉಪಯೋಗಿಸುವ ಮುಂಚೆ ಅದನ್ನು ದೇವರಿಗೆ ಸಮರ್ಪಣೆ ಮಾಡಿ, ವಸ್ತುವನ್ನು ಕೊಟ್ಟು ಉಪಕಾರ ಮಾಡಿದ ಭಗವಂತನಿಗೆ ಕೃತಜ್ಞತೆ ಸಲ್ಲಿಸಿ, ವಸ್ತುವನ್ನು ಉಪಯೋಗಿಸಬೇಕೆನ್ನುವುದು ಶಾಸ್ತ್ರದ ಆದೇಶ. ಉಪಕೃತರಾದ ನಮ್ಮ ಮುಖ್ಯಕರ್ತವ್ಯವೂ ಆಗಿದೆ.

**ದೇವರಪೂಜೆ ದಿನಚರಿಯಲ್ಲಿ ಮುಖ್ಯಕಾರ್ಯ**

ದೇವರು ನಾವು ಬದುಕುವುದಕ್ಕೆ ಅತ್ಯಾವಶ್ಯಕವಾದ ಅನೇಕ ವಸ್ತುಗಳನ್ನು ಕೊಟ್ಟು ಅನಂತ ಉಪಕಾರ ಮಾಡಿದ್ದಾನೆ. ದೇವರ ಅನಂತವಾದ ಅನುಗ್ರಹ ನಮ್ಮ ಮೇಲೆ ಇದೆ. ಭಗವಂತನ ಆ ಅನುಗ್ರಹವನ್ನು ಸ್ಮರಿಸುವುದಕ್ಕಾಗಿ, ಸ್ಮರಿಸಿ ಕೃತಜ್ಞತೆ ಸಲ್ಲಿಸುವುದಕ್ಕಾಗಿ, ದೇವರೇ ಕೊಟ್ಟ ವಸ್ತುಗಳನ್ನು ದೇವರಿಗೇ ಸಮರ್ಪಿಸುವುದಕ್ಕಾಗಿ ಪ್ರತಿನಿತ್ಯ ದೇವರಪೂಜೆಯನ್ನು ಮಾಡಬೇಕು ಎನ್ನುವುದು ತಿಳಿಯಬೇಕಾದ ತತ್ವ. ಈ ಹಿನ್ನೆಲೆಯಲ್ಲಿ ದೇವರಪೂಜೆ ದಿನಚರಿಯಲ್ಲಿ ಪ್ರಮುಖವಾದ ಕಾರ್ಯ.

**ತಿಳಿದು ಆಚರಿಸು, ಹೆಚ್ಚುಪುಣ್ಯ ಸಂಪಾದಿಸು**

ದೇವರಪೂಜೆಯಲ್ಲಿ ಅಭಿಷೇಕ, ತುಳಸೀ-ಪುಷ್ಪಗಳ ಅರ್ಚನೆ, ಮಂಗಳಾರತಿ, ನೈವೇದ್ಯ ಮೊದಲಾದವು ಪ್ರಮುಖವಾಗಿವೆ.

ಏನೇ ಮಾಡಿದರೂ ಅನುಸಂಧಾನ ಇಟ್ಟುಕೊಂಡು ಮಾಡಿದರೆ ಹೆಚ್ಚು ಫಲಕಾರಿ.

**ಓಂ ಯದೇವ ವಿದ್ಯಯೇತಿ ಹಿ ಓಂ**

ಎಂಬ ಬ್ರಹ್ಮಸೂತ್ರದಲ್ಲಿ ಬಾದರಾಯಣರು ಇದನ್ನು ನಿರ್ಣಯಿಸಿ ತಿಳಿಸಿದ್ದಾರೆ.

**''ಯದೇವ ವಿದ್ಯಯಾ ಕರೋತಿ..**
**ತದೇವ ವೀರ್ಯವತ್ತರಂ ಭವತಿ''**

ಮಾಡುವ ಕರ್ಮವನ್ನೇ ಜ್ಞಾನಪೂರ್ವಕವಾಗಿ ಮಾಡಿದರೆ, ಅನುಸಂಧಾನ ಇಟ್ಟುಕೊಂಡು ಮಾಡಿದರೆ ಹೆಚ್ಚು ಫಲಪ್ರದ ಎನ್ನುತ್ತದೆ ಶ್ರುತಿ.

**ಈಗಾಗಲೇ ಬೆಳಗಿದ ''ಪರಂಜ್ಯೋತಿ''**

ಮಂಗಳಾರತಿ ಮಾಡುವಾಗ, ದೀಪ ಹಚ್ಚುವಾಗ ಏನೇನು ಅನುಸಂಧಾನಗಳನ್ನು ಮಾಡಬೇಕು ? ಎಂಬ ವಿಚಾರವನ್ನು ಶ್ರೀಗಳವರು ಬಹಳ ಸುಂದರವಾಗಿ ತಿಳಿಸಿಕೊಟ್ಟಿದ್ದಾರೆ.

ಶ್ರೀಗಳವರ ಆ ಅನುಗ್ರಹಸಂದೇಶಗಳನ್ನು ಸಂಗ್ರಹಿಸಿ, ''ಪರಂಜ್ಯೋತಿ'' ಎಂಬ ಪುಸ್ತಕವನ್ನು ಈಗಾಗಲೇ ಹೊರತರಲಾಗಿದೆ.

**''ಪುಷ್ಪಹಾಸ''ದ ಹಸನ**

ಪ್ರಕೃತ ದೇವರಪೂಜೆಯಲ್ಲಿ ಅಭಿಷೇಕಾನಂತರ ದೇವರಿಗೆ ತುಳಸೀ-ಪುಷ್ಪಗಳನ್ನು ಸಮರ್ಪಿಸುವಾಗ ಏನೇನು ಅನುಸಂಧಾನ ಮಾಡಬೇಕು ? ಎಂಬ ವಿಚಾರವನ್ನು ತೆಗೆದುಕೊಂಡು ಶ್ರೀಗಳವರು ಸುಂದರವಾಗಿ ತಿಳಿಸಿಕೊಟ್ಟಿದ್ದಾರೆ.

2012 ರಲ್ಲಿ ಬೆಂಗಳೂರಿನ ಚಾತುರ್ಮಾಸ್ಯ ಅವಧಿಯಲ್ಲಿ ಶ್ರೀಗಳವರು ಬೆಂಗಳೂರಿನ ಅನೇಕ ಬಡಾವಣೆಗಳಲ್ಲಿ ಪ್ರತಿನಿತ್ಯ ಅನುಗ್ರಹಸಂದೇಶ ನೀಡಿದರು. ''ಭಗವಂತನಿಗೆ ಸರ್ವತೋಮುಖ ಎಂದು ಏಕೆ ಕರೆಯುತ್ತಾರೆ ?'' ಎಂಬುದಾಗಿ ಸರ್ವತೋಮುಖ ಶಬ್ದದ ಅರ್ಥವನ್ನು ತಿಳಿಸುವಾಗ, ಪುಷ್ಪಸಮರ್ಪಣೆ ಮಾಡುವಾಗ ಮಾಡಬೇಕಾದ ಅನುಸಂಧಾನಗಳನ್ನು ತಿಳಿಸಿದ್ದಾರೆ.

ಇತ್ತೀಚೆಗೆ ಐನಾಪುರದಲ್ಲಿ ನಡೆದ 5 ದಿನಗಳ ಜ್ಞಾನಸತ್ರದಲ್ಲಿ ಶ್ರೀಗಳವರು ದೇವರಪೂಜೆಯಲ್ಲಿ ಮಾಡುವ ಅಭಿಷೇಕ-ಮಂಗಳಾರತಿ-ಪುಷ್ಪಸಮರ್ಪಣೆ ಇವುಗಳ ಹಿನ್ನೆಲೆಯಲ್ಲಿ ಮಾಡಬೇಕಾದ ಅನುಸಂಧಾನಗಳನ್ನು ತಮ್ಮ

ಅನುಗ್ರಹಸಂದೇಶಗಳಲ್ಲಿ ಬಹಳ ವಿಸ್ತಾರವಾಗಿ ಸುಂದರವಾಗಿ ತಿಳಿಸಿಕೊಟ್ಟಿದ್ದಾರೆ.

ಹೀಗೆ ದೇವರಿಗೆ ಪುಷ್ಪಗಳನ್ನು ಸಮರ್ಪಿಸುವಾಗ ಮಾಡಬೇಕಾದ ಅನುಸಂಧಾನಗಳ ಬಗ್ಗೆ ಅನೇಕ ಸಂದರ್ಭಗಳಲ್ಲಿ ಶ್ರೀಗಳವರು ನೀಡಿದ ಅನುಗ್ರಹಸಂದೇಶಗಳನ್ನು ಸಂಗ್ರಹಿಸಿ ''ಪುಷ್ಪಹಾಸ'' ಕೃತಿಯನ್ನು ಹೊರತರಲಾಗಿದೆ.

**ಪುಷ್ಪಸಮರ್ಪಣೆಯಲ್ಲಿ ಕೆಲವು ನಿಯಮಗಳು**

ಮತ್ತೊಂದು ಅಂಶವೆಂದರೆ, ಪುಷ್ಪಸಮರ್ಪಣೆಯ ಹಿನ್ನೆಲೆಯಲ್ಲಿ ಮಾಡಬೇಕಾದ ಅನುಸಂಧಾನಗಳ ಜೊತೆಗೆ ಕೆಲವು ನಿಯಮಗಳನ್ನೂ ಈ ಕೃತಿಯಲ್ಲಿ ನಿರೂಪಿಸಲಾಗಿದೆ. ದೇವರಪೂಜೆಗೆ ಹೂವುಗಳನ್ನು ಸಿದ್ಧಪಡಿಸಿಕೊಳ್ಳುವಾಗ ಏನೇನು ನಿಯಮಗಳನ್ನು ಪಾಲಿಸಬೇಕು ಎನ್ನುವುದನ್ನು ವಿವರಿಸಲಾಗಿದೆ.

- ಯಾವ ಹೂವುಗಳನ್ನು ಏರಿಸಬೇಕು ?
- ಎಂತಹ ಹೂವುಗಳನ್ನು ಅರ್ಪಿಸಬೇಕು ?
- ಹೂವುಗಳನ್ನು ಹೇಗೆ ಬಿಡಿಸಬೇಕು ?
- ಹೂವುಗಳನ್ನು ಹೇಗೆ ತರಬೇಕು ?
- ಹೂವುಗಳನ್ನು ಹೇಗೆ ಸಮರ್ಪಿಸಬೇಕು ?
- ಹೂವುಗಳಲ್ಲಿ ಯಾವ ದೇವತೆಯ ಸನ್ನಿಧಾನವನ್ನು ಚಿಂತಿಸಬೇಕು ?

♦ ಪುಷ್ಪಸಮರ್ಪಣೆ ಕಾಲದಲ್ಲಿ ಏನೇನು ಅನುಸಂಧಾನ ಮಾಡಬೇಕು ?

ಇತ್ಯಾದಿಯಾಗಿ ಅನೇಕ ನಿಯಮಗಳನ್ನು ಹಾಗೂ ಅನುಸಂಧಾನಗಳನ್ನು ಇಲ್ಲಿ ವಿವರಿಸಲಾಗಿದೆ.

**ಪರಮಾತ್ಮ ''ಪುಷ್ಪಹಾಸ''**

ಜೊತೆಗೆ ಭಗವಂತನಿಗೆ ''ಪುಷ್ಪಹಾಸ'' ಎಂದು ವಿಶೇಷವಾದ ಹೆಸರು. ಭಗವಂತನಿಗೆ ಪುಷ್ಪಹಾಸ ಎಂದು ಏಕೆ ಕರೆಯುತ್ತಾರೆ ? ಪುಷ್ಪಹಾಸ ಎಂಬ ಹೆಸರಿನ ಹಿನ್ನೆಲೆಯಲ್ಲಿ ಎಷ್ಟು ಮಹತ್ವದ ವಿಚಾರಗಳಿವೆ ? ಇವುಗಳನ್ನು ಶ್ರೀಗಳವರು ಮಾರ್ಮಿಕವಾಗಿ ತಿಳಿಸಿದ್ದಾರೆ. ಅವುಗಳ ಸಂಗ್ರಹವೂ ಇಲ್ಲಿದೆ.

ಒಟ್ಟಿನಲ್ಲಿ ದೇವರಪೂಜೆಯಲ್ಲಿ ದೇವರಿಗೆ ಪುಷ್ಪಗಳನ್ನು ಸಮರ್ಪಿಸುವಾಗ ಪಾಲಿಸಬೇಕಾದ ನಿಯಮಗಳು, ಮಾಡಬೇಕಾದ ಅನುಸಂಧಾನಗಳು, ತಿಳಿದುಕೊಳ್ಳಬೇಕಾದ ವಿಚಾರಗಳು ಎಲ್ಲವನ್ನೂ ಒಳಗೊಂಡು ''ಪುಷ್ಪಹಾಸ'' ಕೃತಿ ನಿಮ್ಮ ಕೈ ಸೇರುತ್ತಿದೆ.

**ಸಾರ್ಥಕತೆಯ ನಿರೀಕ್ಷೆ**

ಅಧಾರ್ಮಿಕತೆಯ ಇಂದಿನ ವಾತಾವರಣದಲ್ಲಿಯೂ ಧರ್ಮಾನುಷ್ಠಾನದ ದೀಕ್ಷೆ ಬಹಳ ಜನರಲ್ಲಿರುವುದು ಅತ್ಯಂತ ಸಂತಸದ ಸಂಗತಿಯೇ. ಮಾಡುವ ಕರ್ಮಗಳನ್ನು

ಜ್ಞಾನಪೂರ್ವಕವಾಗಿ, ಅನುಸಂಧಾನಪೂರ್ವಕವಾಗಿ ಮಾಡಬೇಕು ಎಂಬ ಅವರ ಅಭಿಲಾಷೆ ನಿಜಕ್ಕೂ ಅನುಕರಣೀಯ. ಅಂತಹ ತತ್ವಜಿಜ್ಞಾಸುಗಳ ಜಿಜ್ಞಾಸೆಗೆ ಸ್ಪಂದಿಸಿ ಶ್ರೀಗಳವರ ಉಪನ್ಯಾಸಕೃತಿಗಳನ್ನು ಹೊರತರಲಾಗುತ್ತಿದೆ.

100 ಜನ ಓದುಗರಲ್ಲಿ 10 ಜನರಾದರೂ ಕೃತಿಯಲ್ಲಿ ನಿರೂಪಿಸಿದ ವಿಚಾರಗಳನ್ನು ಶ್ರದ್ಧೆಯಿಂದ ಓದಿ, ವಿಷಯಗಳನ್ನು ಮನದಟ್ಟುಮಾಡಿಕೊಂಡು, ನಿತ್ಯ ದೇವಪೂಜೆಯಕಾಲದಲ್ಲಿ ಪುಷ್ಪಗಳನ್ನು ಸಮರ್ಪಿಸುವಾಗ ಈ ನಿಯಮಗಳನ್ನು ಪಾಲಿಸಿ, ಅನುಸಂಧಾನಗಳನ್ನು ರೂಢಿಸಿಕೊಂಡಿದ್ದೇ ಆದರೆ ಗುರುಗಳ ಶ್ರಮ ಸಾರ್ಥಕವಾಗುವುದರಲ್ಲಿ ಸಂದೇಹವಿಲ್ಲ.

**ಅಂತಹ ಒಂದು ಸಾರ್ಥಕತೆಯ ನಿರೀಕ್ಷೆಯಲ್ಲಿ .....**

**ಕಾಂತೇಶಾಚಾರ್ಯ ಕದರಮಂಡಲಗಿ**

★★★

# ಪೀಠಿಕೆ

**ಏವಂ ಸರ್ವೋತ್ತಮಂ ವಿಷ್ಣುಂ**
**ಧ್ಯಾಯನ್ನೇವಾರ್ಚಯೇದ್ ಹರಿಮ್ ।**
**ಸ್ನಾತ್ವಾ ಸಂಪೂಜಯೇದ್ ವಿಷ್ಣುಂ**
**ವೇದತಂತ್ರೋಕ್ತಮಾರ್ಗತಃ ॥**

-ಸದಾಚಾರಸ್ಮೃತಿ

ವೇದ-ತಂತ್ರಸಾರೋಕ್ತಕ್ರಮದಲ್ಲಿ ಪ್ರತಿನಿತ್ಯ ದೇವಪೂಜೆಯನ್ನು ಎಲ್ಲರೂ ತಪ್ಪದೇ ಮಾಡಲೇಬೇಕು. ಇದು ಆಚಾರ್ಯರ ಕಡ್ಡಾಯ ಆದೇಶ. ದೇವರಪೂಜೆ ಎಂದರೆ ಬೇರೆ ಏನಲ್ಲ. ಭಗವಂತನೇ ಕೊಟ್ಟ ವಸ್ತುಗಳನ್ನು, ಭಗವಂತನದೇ ಆದ ವಸ್ತುಗಳನ್ನು ಭಗವಂತನಿಗೇ ಸಮರ್ಪಣೆ ಮಾಡುವ ಒಂದು ಪ್ರಕ್ರಿಯೆ.

ಉಸಿರಾಡಲು ಗಾಳಿ ಕೊಟ್ಟಿದ್ದಾನೆ. ಕುಡಿಯಲು ನೀರು ಕೊಟ್ಟಿದ್ದಾನೆ. ತಿನ್ನಲು ಹಣ್ಣು-ಹಂಪಲುಗಳನ್ನು, ಧವಸ-ಧಾನ್ಯಗಳನ್ನು ಕೊಟ್ಟಿದ್ದಾನೆ. ಮುಡಿಯಲು, ಭೋಗಿಸಲು ಸುಗಂಧಮಯ ಹೂವುಗಳನ್ನು ಕೊಟ್ಟಿದ್ದಾನೆ. ಎಲ್ಲ ಕಾರ್ಯಗಳಿಗೂ ಅತ್ಯಾವಶ್ಯಕವಾದ ಬೆಳಕು ಕೊಟ್ಟಿದ್ದಾನೆ. ಹೀಗೆ ಬದುಕಲು ಬೇಕಾದ ಎಲ್ಲವನ್ನೂ ಕೊಟ್ಟು ಅನಂತ ಉಪಕಾರ ಮಾಡಿದ್ದಾನೆ ಭಗವಂತ.

ಭಗವಂತನಿಂದ ಅಷ್ಟು ಉಪಕೃತರಾದ ನಾವು ಅವನು ಕೊಟ್ಟ ವಸ್ತುಗಳನ್ನು ಭೋಗಿಸುವ ಮುಂಚೆ ಅವನಿಗೆ ಸಮರ್ಪಣೆ ಮಾಡಿ, ಕೃತಜ್ಞತೆ ಸಲ್ಲಿಸಿ ಸ್ವೀಕರಿಸಬೇಕು ಎನ್ನುವುದು ಶಾಸ್ತ್ರದ ಆದೇಶ. ಭಗವಂತ ಕೊಟ್ಟ ನಾನಾವಸ್ತುಗಳನ್ನು ಭಗವಂತನಿಗೆ ಸಮರ್ಪಣೆ ಮಾಡುವುದು ಹೇಗೆ ? ಅದಕ್ಕಾಗಿ ಆಚಾರ್ಯರು ಹಾಕಿಕೊಟ್ಟ ಮಾರ್ಗ - ದೇವಪೂಜೆ.

★ ಉಸಿರಾಡಲು ಗಾಳಿ ಕೊಟ್ಟ ಭಗವಂತನಿಗೆ ಚಾಮರಸೇವೆ

★ ಕುಡಿಯಲು ನೀರು ಕೊಟ್ಟ ಭಗವಂತನಿಗೆ ಅಭಿಷೇಕ, ನೀರಿನ ನೈವೇದ್ಯ

★ ತಿನ್ನಲು ಆಹಾರ ಕೊಟ್ಟ ಭಗವಂತನಿಗೆ ನಾನಾಪದಾರ್ಥಗಳ ನೈವೇದ್ಯ

★ ಹಗಲು-ರಾತ್ರಿ ಬೆಳಕು ಕೊಟ್ಟ ಭಗವಂತನಿಗೆ ದೀಪ-ಆರತಿಗಳು

★ ಮುಡಿಯಲು-ಭೋಗಿಸಲು ಹೂವುಗಳನ್ನು ಕೊಟ್ಟ ಭಗವಂತನಿಗೆ ಪುಷ್ಪಗಳ ಅರ್ಪಣೆ

★ ಉಡಲು ವಸ್ತ್ರಗಳನ್ನು ಇತ್ತು ಮಾನ ಸಂರಕ್ಷಿಸುತ್ತಿರುವ ಭಗವಂತನಿಗೆ ವಸ್ತ್ರಸಮರ್ಪಣೆ

ಹೀಗೆ ಭಗವಂತ ಕೊಟ್ಟಿರುವ ನಾನಾಪದಾರ್ಥಗಳನ್ನು ದೇವಪೂಜಾಕಾಲದಲ್ಲಿ ನಾನಾರೀತಿಗಳಲ್ಲಿ ಸಮರ್ಪಣೆ ಮಾಡಿ

ಅವುಗಳ ಹಿನ್ನೆಲೆಯಲ್ಲಿರುವ ಭಗವಂತನ ಉಪಕಾರಗಳನ್ನು ಸ್ಮರಿಸಬೇಕಾದದ್ದು ಉಪಕೃತರಾದ ನಮ್ಮ ಕೃತಜ್ಞತೆ.

ದೇವಪೂಜಾಕಾಲದಲ್ಲಿ ಹೀಗೆ ನಾನಾ ಪದಾರ್ಥಗಳನ್ನು ಸಮರ್ಪಣೆ ಮಾಡುತ್ತೇವೆಯಾದರೂ, ಅವಸರ-ಅವಸರದಲ್ಲಿ ಅನುಸಂಧಾನಗಳಿಲ್ಲದೇ ಅರ್ಪಣೆ ಮಾಡಿದರೆ, ಕೋಟಿ ರೂಪಾಯಿಗಳನ್ನು ಕೊಡುವವನಿಂದ ಕೇವಲ 10 ರೂಗಳನ್ನು ಪಡೆದಂತಾಗುತ್ತದೆ.

**''ಯದೇವ ವಿದ್ಯಯಾ ಕರೋತಿ ಶ್ರದ್ಧಯಾ**
**ಉಪನಿಷದಾ ತದೇವ ವೀರ್ಯವತ್ತರಂ ಭವತಿ ॥''**

ಎಂಬುದಾಗಿ ಶ್ರುತಿ ತಿಳಿಸುವಂತೆ ಜ್ಞಾನಪೂರ್ವಕವಾಗಿ, ಅನುಸಂಧಾನಪೂರ್ವಕವಾಗಿ ಸಮರ್ಪಣೆ ಮಾಡಿದರೆ 10 ಪುಣ್ಯ ಪಡೆಯುವಲ್ಲಿ 100 ಪುಣ್ಯ, 1000 ಪುಣ್ಯ ಪಡೆಯಬಹುದು.

ಈ ಹಿನ್ನೆಲೆಯಲ್ಲಿ ಚಾಮರಸೇವೆ ಮಾಡುವಾಗ, ದೀಪ-ಆರತಿಗಳನ್ನು ಸಮರ್ಪಿಸುವಾಗ ಮಾಡಬೇಕಾದ ಅನುಸಂಧಾನಗಳನ್ನು ಈ ಹಿಂದೆ ತಿಳಿದಿದ್ದೇವೆ.

(ವಿ.ಸೂ. ದೀಪ ಹಚ್ಚುವಾಗ, ಆರತಿ ಮಾಡುವಾಗ ಮಾಡಬೇಕಾದ ಅನುಸಂಧಾನಗಳನ್ನು ಸಂಗ್ರಹಿಸಿ **'ಪರಂಜ್ಯೋತಿ'** ಎಂಬ ಕೃತಿಯನ್ನು ಹೊರತರಲಾಗಿದೆ.)

ಈಗ ಪುಷ್ಪಗಳ ಸಮರ್ಪಣೆ ಮಾಡುವಾಗ ಮಾಡಬೇಕಾದ ಅನುಸಂಧಾನಗಳನ್ನು ಸ್ವಲ್ಪ ತಿಳಿಯೋಣ.

ದೇವಪೂಜೆಯಲ್ಲಿ ಅಭಿಷೇಕಾನಂತರ ಭಗವಂತನಿಗೆ ಗಂಧ-ಅಕ್ಷತೆಗಳನ್ನು ಸಮರ್ಪಿಸಿ, ವಿಷ್ಣುಸಹಸ್ರನಾಮಾದಿಗಳನ್ನು ಪಠಿಸುತ್ತಾ , ತುಲಸಿಯಿಂದ ಅರ್ಚನೆಯನ್ನೂ ಮಾಡಿ

**ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ ।**
**ಮಯಾऽಹೃತಾನಿ ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಮ್ ॥**

ಎಂಬುದಾಗಿ ಪ್ರಾರ್ಥನೆ ಮಾಡುತ್ತಾ , ಪ್ರಾತಃಸ್ನಾನಕ್ಕಿಂತಲೂ ಮುಂಚೆಯೇ ತಂದಿಟ್ಟುಕೊಂಡ ಅಥವಾ ಸ್ನಾನ ಮಾಡದ ಶಿಷ್ಯ-ಪುತ್ರಾದಿಗಳಿಂದ ತರಿಸಲ್ಪಟ್ಟ ಪುಷ್ಪಗಳನ್ನು ದೇವರ ಪಾದಗಳಿಗೆ ಸಮರ್ಪಿಸಬೇಕು.

ದೇವರಿಗೆ ಪುಷ್ಪಗಳನ್ನು ಸಮರ್ಪಿಸುವಾಗ, ಶಾಸ್ತ್ರ ತಿಳಿಸುವ ಕೆಲವು ನಿಯಮಗಳನ್ನು ತಿಳಿದುಕೊಂಡು ಅವುಗಳನ್ನು ರೂಢಿಸಿಕೊಳ್ಳುವುದು ಅತ್ಯಾವಶ್ಯಕ. ಜೊತೆಗೆ ಪುಷ್ಪಸಮರ್ಪಣೆ ಕಾಲದಲ್ಲಿ ಕೆಲವು ಅನುಸಂಧಾನಗಳನ್ನು ಮಾಡಬೇಕಾದದ್ದೂ ಅತ್ಯಾವಶ್ಯಕವೇ.

ಈ ಹಿನ್ನೆಲೆಯಲ್ಲಿ ಶಾಸ್ತ್ರ ತಿಳಿಸುವ ಆ ನಿಯಮಗಳನ್ನು ಹಾಗೂ ಕೆಲವು ಅನುಸಂಧಾನಗಳನ್ನು ಜ್ಞಾನಿಗಳ ಮಾರ್ಗದರ್ಶನದಲ್ಲಿ ಯಥಾಮತಿಯಾಗಿ ಸ್ವಲ್ಪ ತಿಳಿಯೋಣ.

# ಪುಷ್ಪಸಮರ್ಪಣೆಗೆ ಕೆಲವು ನಿಯಮಗಳು

ಭಗವಂತನಿಗೆ ಪುಷ್ಪಗಳನ್ನು ಏರಿಸುವಾಗ ತಿಳಿಯಬೇಕಾದ ಮಹತ್ವದ ವಿಷಯಗಳು, ಮಾಡಬೇಕಾದ ಅನುಸಂಧಾನಗಳು ಸಾಕಷ್ಟಿವೆ. ಅವುಗಳಲ್ಲಿ ಕೆಲವನ್ನು ಅವಲೋಕಿಸೋಣ.

**★ ಸುಗಂಧಮಯವಾದ ಹೂಗಳನ್ನು ಏರಿಸಬೇಕು.**

ದೇವರಿಗೆ ಎಂತಹ ಹೂಗಳನ್ನು ಅರ್ಪಿಸಬೇಕು ?

**''ವೃಕ್ಷಾದಿಜಾನ್ಯಪಿ ಸದ್ವರ್ಣಾನಿ ಸದ್ಗಂಧಾನಿ ಪೂಜಾಯ್ಶೈ ಸಂಗ್ರಾಹ್ಯಾಣಿ ಕೇತಕೀಮಲ್ಲಿಕಾಪುನ್ನಾಗಚಂಪಕಾದೀನಿ ।''**

(ನರಸಿಂಹಾಚಾರ್ಯವಿರಚಿತಾ ಸದಾಚಾರಸ್ಮೃತಿವ್ಯಾಖ್ಯಾ ಭಾವಪ್ರಕಾಶಿಕಾ ಶ್ಲೋ-11)

ಭಗವಂತನಿಗೆ ಹೂಗಳನ್ನು ಏರಿಸುವಾಗ ಒಳ್ಳೆಯ ಬಣ್ಣ ಉಳ್ಳ, ಸುಗಂಧಮಯವಾದ, ಶಾಸ್ತ್ರವಿಹಿತವಾದ ಮಲ್ಲಿಗೆ-ಸಂಪಿಗೆ-ಕ್ಯಾದಿಗಿ ಮೊದಲಾದ ಹೂಗಳನ್ನು ಮಾತ್ರವೇ ಏರಿಸಬೇಕು. ಸುಗಂಧವಿಲ್ಲದ, ನಿಷಿದ್ಧವಾದ ಹೂಗಳನ್ನು ಏರಿಸಬಾರದು.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥**

ಎಂಬುದಾಗಿ ಪತ್ರ-ಪುಷ್ಪ-ಫಲ-ತೋಯ (ನೀರು) ಏನನ್ನೇ ಭಕ್ತಿಯಿಂದ ನನಗೆ ಅರ್ಪಿಸಿದರೂ ನಾನು ಅದನ್ನು ಸ್ವೀಕರಿಸುತ್ತೇನೆ ಎಂದು ಕೃಷ್ಣ ಗೀತೆಯಲ್ಲಿ ಹೇಳಿದಾಗ

**''ನ ತು ಅವಿಹಿತಪತ್ರಾದಿ ।।''** (ಗೀತಾಭಾಷ್ಯ)

ಏನನ್ನೇ ಅರ್ಪಿಸಿದರೂ ಸ್ವೀಕರಿಸುತ್ತೇನೆ ಎಂದರೆ, ''ಶಾಸ್ತ್ರನಿಷಿದ್ಧವಾದ ಪತ್ರ-ಪುಷ್ಪಾದಿಗಳನ್ನೂ ಅರ್ಪಿಸಬಹುದು ಎಂದು ಅರ್ಥವಲ್ಲ. ನಿಷಿದ್ಧವಾದ ಪತ್ರ-ಪುಷ್ಪಾದಿಗಳನ್ನು ಅರ್ಪಿಸಬಾರದು. ವಿಹಿತವಾದ ಪತ್ರ-ಪುಷ್ಪಾದಿಗಳನ್ನೇ ಅರ್ಪಿಸಬೇಕು'' ಎಂಬುದಾಗಿ ಭಾಷ್ಯದಲ್ಲಿ ಆಚಾರ್ಯರು ಎಚ್ಚರಿಸುತ್ತಾರೆ. ಹಾಗಾಗಿ ಸುಗಂಧಮಯವಾದ, ವಿಹಿತವಾದ ಹೂವುಗಳನ್ನು ಮಾತ್ರವೇ ದೇವರಿಗೆ ಸಮರ್ಪಿಸಬೇಕು.

**★ ಅಂದಿನ ಹೂವುಗಳನ್ನೇ ಏರಿಸಬೇಕು**

ಹೂವುಗಳ್ನು ಏರಿಸುವಾಗಲೂ ಹಿಂದಿನ ದಿನದ ಹೂಗಳನ್ನು ಏರಿಸಬಾರದು. ಅಂದಿನ ಹೂವುಗಳನ್ನೇ ಏರಿಸಬೇಕು.

**★ ಸ್ನಾನಕ್ಕಿಂತ ಮುಂಚೆಯೇ ಹೂವುಗಳನ್ನು ಬಿಡಿಸಿಟ್ಟುಕೊಳ್ಳಬೇಕು**

ತುಳಸಿಯನ್ನು ತರುವಾಗ, ಸ್ನಾನ ಮಾಡಿದ ನಂತರವೇ ತುಳಸೀದಳಗಳನ್ನು ಬಿಡಿಸಿ ತರಬೇಕು. ಸ್ನಾನಕ್ಕಿಂತ ಮುಂಚೆ ತುಳಸಿಯನ್ನು ಬಿಡಿಸಬಾರದು.

**ತುಲಸೀದಲಾನಿ ಸ್ನಾತ್ವೈವ ಆನೀತಾನಿ ಸಮರ್ಪಣೀಯಾನಿ। 'ಅಸ್ನಾತ್ವಾ ತುಲಸೀಂ ಛಿತ್ವಾ ಯೇಽರ್ಚಯಂತಿ ಜನಾರ್ದನಮ್। ಅಶುದ್ಧಾ ಸಂಭವೇತ್ಪೂಜಾ ಪಂಚಗವ್ಯೇನ ಶುದ್ಧ್ಯತಿ ॥' ಇತಿ ವಚನಾತ್ । (ಪದ್ಯಮಾಲಾವ್ಯಾಖ್ಯಾನ - ಪೂಜಾಕಲ್ಪಲತಾ)**

ಆದರೆ ಹೂಗಳನ್ನು ತರುವಾಗ ಇದರ ವೈಪರೀತ್ಯವನ್ನು ಹೇಳುತ್ತಾರೆ. ಸ್ನಾನ ಮಾಡುವುದಕ್ಕಿಂತ ಮುಂಚೆಯೇ ಹೂವುಗಳನ್ನು ಬಿಡಿಸಿಕೊಂಡು ತಂದಿಟ್ಟುಕೊಳ್ಳಬೇಕು. ಸ್ನಾನ ಮಾಡಿದ ಮೇಲೆ ಹೂವುಗಳನ್ನು ಬಿಡಿಸಬಾರದು.

**ಪ್ರಾತಃಸ್ನಾನಾತ್ ಪೂರ್ವಮೇವ ಆನೀತಾನಿ ಅಸ್ನಾತೇನ ಶಿಷ್ಯಾದಿನಾ ವಾ ಆನೀತಾನಿ ಪುಷ್ಪಾಣಿ ಸಮರ್ಪಯೇತ್ ।**

**ಸ್ನಾನಂ ಕೃತ್ವಾ ತು ಯೇ ಕೇಚಿತ್ ಪುಷ್ಪಂ ಗೃಹ್ಣಂತಿ ವೈ ದ್ವಿಜಾಃ ।
ದೇವತಾಸ್ತನ್ನ ಗೃಹ್ಣಂತಿ ಭಸ್ಮೀಭವತಿ ಕಾಷ್ಠವತ್ ॥**

**ಇತಿ ಹಾರೀತೇನ ಸ್ನಾತ್ವಾ ಪುಷ್ಪಚಯನನಿಷೇಧಕರಣಾತ್। (ಪದ್ಯಮಾಲಾವ್ಯಾಖ್ಯಾನ - ಪೂಜಾಕಲ್ಪಲತಾ)**

ಎಂಬುದಾಗಿ ಶ್ರೀಮಟ್ಟೀಕಾಕೃತ್ಪಾದರ ಪದ್ಯಮಾಲಾವನ್ನು ವ್ಯಾಖ್ಯಾನಿಸುವಾಗ ತಮ್ಮ 'ಪೂಜಾಕಲ್ಪಲತಾ'ದಲ್ಲಿ ಆ ವಿಷಯವನ್ನು ಶ್ರೀಜಯರಾಮಾಚಾರ್ಯರು ಸ್ಪಷ್ಟವಾಗಿ ಪ್ರಮಾಣಪುರಸ್ಸರವಾಗಿ ತಿಳಿಸಿದ್ದಾರೆ.

**★ ಹೂವುಗಳನ್ನು ಬಲಗೈಯಿಂದ ಬಿಡಿಸಬೇಕು**

**★ ಹೂಗಳ ಸುವಾಸನೆಯನ್ನು ಆಘ್ರಾಣ ಮಾಡಬಾರದು**

ಹೂಗಳನ್ನು ಬಿಡಿಸುವಾಗ ಹಸ್ತಗಳು ಶುದ್ಧವಿರಬೇಕು. ಹೂಗಳನ್ನು ಎಡಗೈಯಿಂದ ಬಿಡಿಸಬಾರದು. ಬಲಗೈಯಿಂದ ಬಿಡಿಸಬೇಕು. ಹೂಗಳನ್ನು ಬಿಡಿಸಿ ತರುವಾಗ ಎಡಗೈಯಲ್ಲಿ ತರಬಾರದು. ಎರಡೂ ಕೈಗಳಲ್ಲಿ ಪಾತ್ರೆಯನ್ನು ಹಿಡಿದು ತರಬೇಕು. ಹೂಗಳನ್ನು ಬಿಡಿಸುವಾಗ, ತರುವಾಗ ಹೂಗಳ ಸುವಾಸನೆಯನ್ನು ಆಘ್ರಾಣ ಮಾಡಬಾರದು.

ಅನ್ನುವುದಕ್ಕಾಗಿಯೇ ಸುಮಧ್ವವಿಜಯದಲ್ಲಿ ಒಂದು ಉಲ್ಲೇಖ ಉಂಟು -

**ರಾಮಾರ್ಚನೇ ಯೋ ನಯತಃ ಪ್ರಸೂನಂ**
**ದೋರ್ಭ್ಯಾಂ ಕರಾಭ್ಯಾಮಭವತ್ ಪ್ರಯತ್ನಃ ।**
**ಏಕೇನ ದೋಷ್ಣಾ ನಯತೋ ಗಿರೀಂದ್ರಂ**
**ಸಂಜೀವನಾದ್ಯಾಶ್ರಯಮಸ್ಯ ನಾಭೂತ್ ॥**

(ಸರ್ಗ-1,ಶ್ಲೋ-19)

ರಾಮಾಯಣಯುದ್ಧಕಾಲದಲ್ಲಿ ಮೃತರಾದ ಕಪಿಗಳನ್ನು ಪುನಃ ಬದುಕಿಸುವುದಕ್ಕಾಗಿ ಹನುಮಂತದೇವರು ಹಿಮಾಲಯಕ್ಕೆ ತೆರಳಿ ಮೃತಸಂಜೀವಿನೀ ಮೊದಲಾದ ಔಷಧವೃಕ್ಷಗಳಿಗೆ ಆಧಾರವಾದ ಗಂಧಮಾದನ ಪರ್ವತವನ್ನೇ ಕಿತ್ತುಕೊಂಡು,

ಲಂಕೆಯವರೆಗೆ ಒಂದೇಕೈಯಿಂದ ಏನೂ ಆಯಾಸವಿಲ್ಲದೇ ತರುತ್ತಾರೆ.

ಈ ಪ್ರಸಂಗವನ್ನು ಉಲ್ಲೇಖಿಸುತ್ತಾ, ಹನುಮಂತದೇವರು ರಾಮದೇವರ ಪೂಜೆಗಾಗಿ ಹೂಗಳನ್ನು ತರುವಾಗ ಎರಡೂ ಕೈಗಳಿಂದ ಹೂಗಳನ್ನು ತರುತ್ತಿದ್ದರು. ಹೂಗಳು ಬಹಳ ಹಗುರವಾದ ವಸ್ತುಗಳು. ಅಂತಹ ಹಗುರವಾದ ಹೂಗಳನ್ನು ಎರಡೂ ಕೈಗಳಿಂದ ತರುವಾಗ ಹನುಮಂತದೇವರಿಗೆ ಬಹಳ ಶ್ರಮವಾಯಿತಂತೆ. ಆದರೆ ಹಿಮಾಲಯದಿಂದ ಲಂಕಾ ಪಟ್ಟಣದವರೆಗೆ ಗಂಧಮಾದನ ಪರ್ವತವನ್ನು ಒಂದೇ ಕೈಯಿಂದ ತರುವಾಗ ಏನೂ ಶ್ರಮವಾಗಲಿಲ್ಲವಂತೆ. ಕಾರಣ ಶೇಷದೇವರಿಂದ ಸಹಿತವಾದ ಸಮಗ್ರಬ್ರಹ್ಮಾಂಡವನ್ನೇ ಕೇವಲ ತಮ್ಮ ಪುಚ್ಛದ ಮೇಲೆ ಧಾರಣ ಮಾಡಿದ ವಾಯು(ಕೂರ್ಮ) ದೇವರಿಗೆ ಈ ಪರ್ವತ ಯಾವ ಭಾರ ?

ಹಾಗಾದರೆ ಭಾರದಿಂದ ಶ್ರಮ ಅಲ್ಲ ಅವರಿಗೆ. ಕಿಂತು ಅತ್ಯಂತ ಹಗುರವಾದ ಹೂಗಳನ್ನು ತರುವಾಗ ಪಾಲಿಸಬೇಕಾದ ನಿಯಮಗಳು ಅವರಿಗೆ ಭಾರವನ್ನುಂಟುಮಾಡಿದವು ಎನ್ನುವುದು ಅಲ್ಲಿ ತಾತ್ಪರ್ಯ. ಅಂದಮೇಲೆ ಹಸ್ತಗಳು ಶುದ್ಧವಿರಬೇಕು, ಎಡಗೈಯಿಂದ ಮುಟ್ಟಬಾರದು, ಹೂಗಳು ಕೈಯಲ್ಲೇ ಇದ್ದರೂ ಅವುಗಳ ಸುವಾಸನೆಯನ್ನು ಆಘ್ರಾಣ ಮಾಡಬಾರದು ಇತ್ಯಾದಿ ನಿಯಮಗಳು ಎಷ್ಟು ಮಹತ್ವದ್ದಲ್ಲವೇ ?

**★ ಶುದ್ಧೋದಕದಿಂದ ಪ್ರೋಕ್ಷಿಸಿ ತೆಗೆದುಕೊಳ್ಳಬೇಕು**

ತುಳಸಿಯನ್ನು ಏರಿಸುವಾಗ ತುಳಸಿಗೆ ಶುದ್ಧೋದಕದಿಂದ ಪ್ರೋಕ್ಷಣೆ ಮಾಡಬಾರದು. ಕಾರಣ ತುಳಸಿ ಯಾವಾಗಲೂ ಶುಚಿಯೇ. ಆದರೆ ಪಾತ್ರೆಯಲ್ಲಿದ್ದ ಹೂಗಳನ್ನು ತೆಗೆದುಕೊಳ್ಳುವಾಗ ಮಾತ್ರ ಶುದ್ಧೋದಕದಿಂದ ಪ್ರೋಕ್ಷಣೆ ಮಾಡಿಕೊಂಡೇ ತೆಗೆದುಕೊಳ್ಳಬೇಕು.

**★ ಒಂದೊಂದೇ ಹೂವನ್ನು ತೆಗೆದುಕೊಂಡು ಸಮರ್ಪಿಸಬೇಕು**

ತುಳಸೀದಳಗಳನ್ನು ಅರ್ಪಿಸುವಾಗ, ವಿಹಿತವಾದ ಸುಗಂಧಮಯ ಹೂಗಳನ್ನು ದೇವರಿಗೆ ಏರಿಸುವಾಗ, ಒಂದೊಂದೇ ತುಳಸೀದಳವನ್ನು, ಒಂದೊಂದೇ ಹೂವನ್ನು ತೆಗೆದುಕೊಂಡು ಸಮರ್ಪಣೆ ಮಾಡಬೇಕು.

**ಅತ್ರ ಏಕೈಕಂ ಪುಷ್ಪಂ ತುಳಸೀದಳಂ ವಾ ಆದಾಯ ಸಮರ್ಪಣಂ ಕಾರ್ಯಮ್ ।**

**'ಪ್ರತ್ಯೇಕಂ ಪುಷ್ಪಮಾದಾಯ**
**ತುಳಸೀಂ ವಾ ಸಮರ್ಪಯೇತ್ ।**
**ಪ್ರತ್ಯೇಕಂ ಮೂಲಮಂತ್ರೈರ್ವಾ**
**ಯುಗಪನ್ನಾರ್ಪಯೇನ್ಮಮ ॥**

**ಯಾವಂತಿ ಯುಗಪದ್ದದ್ಯಾತ್**
**ತಾವದೇಕಮಿತೀರಿತಮ್ ।'**

**ಇತಿ ವಾರಾಹೋಕ್ತೇಃ ॥ ತಥಾ ಚೈಕೈಕಂ ಪುಷ್ಪಂ ತುಳಸೀದಳಂ ವಾ ಗೃಹೀತ್ವಾ ಕೇಶವಾದಿಚತುರ್ವಿಂಶತಿನಾಮಭಿಃ ಮತ್ಸ್ಯಾದಿ ದಶನಾಮಭಿಃ ನಾರಾಯಣಾದ್ಯಷ್ಟೋತ್ತರನಾಮಭಿಃ ವಿಶ್ವಾದಿ-ಸಹಸ್ರನಾಮಭಿಶ್ಚ ಯಥಾಸಂಭವಮರ್ಪಣಂ ಕಾರ್ಯಮ್ ।**

**(ಪದ್ಯಮಾಲಾವ್ಯಾಖ್ಯಾನ - ಪೂಜಾಕಲ್ಪಲತಾ)**

ಒಂದೊಂದೇ ತುಳಸೀದಳವನ್ನು, ಒಂದೊಂದೇ ಹೂವುಗಳನ್ನು ತೆಗೆದುಕೊಂಡು ಪ್ರತ್ಯೇಕ ಪ್ರತ್ಯೇಕವಾಗಿಯೇ ಸಮರ್ಪಣೆ ಮಾಡಬೇಕು. ಹತ್ತು ಹೂಗಳನ್ನು ಒಟ್ಟಿಗೇ ಸಮರ್ಪಣೆ ಮಾಡಿದರೆ ಅದು ಒಂದು ಹೂವಿನ ಅರ್ಪಣೆ ಎನಿಸುತ್ತದೆ.

ಹಾಗೆ ತುಳಸೀದಳಗಳನ್ನು, ಹೂವುಗಳನ್ನು ಸಮರ್ಪಿಸುವಾಗ ಕೇಶವಾದಿ 24 ನಾಮಗಳನ್ನು, ಮತ್ಸ್ಯಾದಿ 10 ನಾಮಗಳನ್ನು, ನಾರಾಯಣಾದಿ 108 ನಾಮಗಳನ್ನು, ವಿಶ್ವಾದಿ 1000 ನಾಮಗಳನ್ನು ಪಠಿಸುತ್ತಾ ಸಮರ್ಪಣೆ ಮಾಡಬೇಕು.

**★ ಖರೀದಿಸಿದ, ಶೂದ್ರರು ತಂದ ಹೂವು ನಿಷಿದ್ಧ**

ಹಣ ಕೊಟ್ಟು ತಂದ (ಖರೀದಿಸಿದ) ಹೂವುಗಳನ್ನು ಏರಿಸಬಾರದು. ಮನೆಯಲ್ಲಿ, (ತಮ್ಮ) ತೋಟದಲ್ಲಿ ಬೆಳೆಸಿದ ಗಿಡ-ಬಳ್ಳಿಗಳಲ್ಲಿ ಬಿಟ್ಟ ಹೂವುಗಳನ್ನು ತಂದು ಅರ್ಪಿಸಬೇಕು.




ಸಂಸ್ಕಾರಪದ್ಧತಿ ಎಂಬ ಗ್ರಂಥ ಈ ಬಗ್ಗೆ ಎಚ್ಚರಿಕೆ ಕೊಡುತ್ತದೆ-

**ಸಮಿತ್‌ಪುಷ್ಪಕುಶಾದೀನಿ**
**ಬ್ರಾಹ್ಮಣಃ ಸ್ವಯಮಾಹರೇತ್ ।**
**ಶೂದ್ರಾನೀತೈಃ ಕ್ರಯಕ್ರೀತೈಃ**
**ಕರ್ಮ ಕುರ್ವನ್ ಪತತ್ಯಧಃ।**

ಹೋಮ-ಹವನಗಳಿಗೆ ಸಮಿತ್ತುಗಳು ಕುಶಗಳು ಅತ್ಯಾವಶ್ಯಕ. ಆದರೆ ಅವುಗಳನ್ನು ಬ್ರಾಹ್ಮಣ ಸ್ವಯಂ ತಾನೇ ತಂದು ಹೋಮ ಮಾಡಬೇಕು. ಒಂದುವೇಳೆ ತನಗೆ ತರಲು ಆಗದಿದ್ದರೆ ಶಿಷ್ಯರು, ಸಂಬಂಧಿಗಳ ಮೂಲಕ ತರಿಸಬೇಕು. ಆದರೆ ಶೂದ್ರರಿಂದ ತರಿಸುವುದು, ಹಣ ಕೊಟ್ಟು ಖರೀದಿಸುವುದು ನಿಷಿದ್ಧ.

ಅದೇ ರೀತಿ ದೇವರಪೂಜೆಗೆ ಈ ಹಿಂದೆ ತಿಳಿದಂತೆ ಸ್ನಾನಕ್ಕಿಂತಲೂ ಪೂರ್ವದಲ್ಲಿ ತಾವೇ ಹೂವುಗಳನ್ನು ತಂದಿಟ್ಟುಕೊಳ್ಳಬೇಕು. ಅಥವಾ ಸ್ನಾನ ಮಾಡದ ಶಿಷ್ಯರ ಮೂಲಕ, ಸಂಬಂಧಿಗಳ ಮೂಲಕ ತರಿಸಬೇಕು. ಹೊರತು ಶೂದ್ರರಿಂದ ಹೂವುಗಳನ್ನು ತರಿಸುವುದಾಗಲೀ, ಹೂವುಗಳನ್ನು ಹಣ ಕೊಟ್ಟು ಖರೀದಿಸುವುದಾಗಲೀ ಮಾಡಬಾರದು. ಮನೆಯಲ್ಲಿ, ತೋಟದಲ್ಲಿ ಬಿಟ್ಟ (ಬೆಳೆಸಿದ) ಹೂವುಗಳನ್ನು ಮಾತ್ರವೇ ದೇವರಿಗೆ ಏರಿಸಬೇಕು.

**★ ಬೆಳ್ಳಿ-ಬಂಗಾರದ ಹೂವುಗಳು**

ಒಂದುವೇಳೆ ಹಾಗೆ ಗಿಡ-ಬಳ್ಳಿಗಳಲ್ಲಿ ಬಿಟ್ಟ ಹೂಗಳು ಸಿಗದಿದ್ದಾಗ, ಬೆಳ್ಳಿಯ ಬಂಗಾರದ ಹೂವುಗಳನ್ನು ಅರ್ಪಿಸಬೇಕು. ಬೆಳ್ಳಿಯ-ಬಂಗಾರದ ಹೂವುಗಳನ್ನು ಒಮ್ಮೆ ಮಾಡಿಸಿಟ್ಟುಕೊಂಡು ಪ್ರತಿನಿತ್ಯ ಅವುಗಳನ್ನು ಅರ್ಪಿಸಬಹುದು.

ಹಿಂದಿನ ದಿನ ಏರಿಸಿದ ಬೆಳ್ಳಿ-ಬಂಗಾರ ಹೂವುಗಳನ್ನು ಮತ್ತೆ ಇಂದು ಹೇಗೆ ಏರಿಸುವುದು ? ಅದು ನಿರ್ಮಾಲ್ಯ ಆಗುವುದಿಲ್ಲವೇ ? ಎಂಬ ಶಂಕೆ ಬೇಡ.

**ನ ನಿರ್ಮಾಲ್ಯಂ ಹೇಮಪುಷ್ಪಂ**
**ಅರ್ಪಯೇದರ್ಪಿತೇ ಸದಾ ।**

(ನರಸಿಂಹಾಚಾರ್ಯವಿರಚಿತಾ
ಸದಾಚಾರಸ್ಮೃತಿವ್ಯಾಖ್ಯಾ ಭಾವಪ್ರಕಾಶಿಕಾ ಶ್ಲೋ-11)

ಹಿಂದಿನ ದಿನ ಏರಿಸಿದ ಹೂವುಗಳನ್ನು ಮರುದಿನ ಮತ್ತೆ ಏರಿಸಬಾರದು ಎಂಬ ನಿಯಮ ಗಿಡ-ಬಳ್ಳಿಗಳಲ್ಲಿ ಬಿಡುವ ಸ್ವಾಭಾವಿಕ ಹೂವುಗಳಿಗೆ ಸಂಬಂಧಿಸಿದ್ದು. ಬೆಳ್ಳಿ-ಬಂಗಾರದ ಹೂವುಗಳಿಗೆ ಆ ನಿಯಮ ಸಂಬಂಧಿಸುವುದಿಲ್ಲ. ಹಿಂದಿನ ದಿನ ಏರಿಸಿದ ಬೆಳ್ಳಿ-ಬಂಗಾರದ ಹೂವುಗಳು ನಿರ್ಮಾಲ್ಯ ವಾಗುವುದಿಲ್ಲ. ಹಾಗಾಗಿ ಒಮ್ಮೆ ಮಾಡಿಸಿಟ್ಟುಕೊಂಡು ಬೆಳ್ಳಿ-ಬಂಗಾರದ ಹೂವುಗಳನ್ನು ಪ್ರತಿನಿತ್ಯ ಏರಿಸಬಹುದು.

**★ ಹೂವಿಲ್ಲದಿದ್ದರೆ ಹೂಗಿಡಗಳ ಎಲೆಗಳನ್ನಾದರೂ ಏರಿಸಬೇಕು**

ಅಥವಾ ಹೂಗಳು ಇಲ್ಲದಿದ್ದಾಗ ಆಯಾ ಹೂಗಿಡಗಳ ಎಲೆಗಳಿಂದಲಾದರೂ ಪೂಜೆ ನೆರವೇರಿಸಬೇಕು.

**ಯೇಷಾಂ ನ ಸಂತಿ ಪುಷ್ಪಾಣಿ**
**ಪ್ರಶಸ್ತ್ಯಾನ್ಯರ್ಚನಂ ಹರೇಃ ।**
**ಪಲ್ಲವಾನ್ಯಪಿ ತೇಷಾಂ ಸ್ಯುಃ**
**ಶಸ್ತಾನ್ಯರ್ಚಾವಿಧೌ ಹರೇಃ ॥**

**ಇತಿ ವಚನಾತ್ ಪುಷ್ಪಾಭಾವೇ ತತ್ಪಲ್ಲವೈರ್ವಾ ಪೂಜಾ ಕಾರ್ಯಾ । (ಪದ್ಯಮಾಲಾವ್ಯಾಖ್ಯಾನ - ಪೂಜಾಕಲ್ಪಲತಾ)**

★★★



# ಹೂವುಗಳಲ್ಲಿ ದೇವತೆಗಳ ಸನ್ನಿಧಾನ ಚಿಂತಿಸಬೇಕು

ಮುಖ್ಯವಾಗಿ ತಿಳಿಯಬೇಕಾದದ್ದು :- ದೇವರಿಗೆ ಹೂವುಗಳನ್ನು ಏರಿಸುವಾಗ ಒಂದೊಂದು ಹೂವುಗಳಲ್ಲಿ ಒಬ್ಬೊಬ್ಬ ದೇವತೆ ಸನ್ನಿಹಿತರಾಗಿರುತ್ತಾರೆ ಎಂಬ ಚಿಂತನೆ ಅತ್ಯಾವಶ್ಯಕ.

**ಪಾರಿಜಾತಸ್ಯ ಪುಷ್ಪೇಷು ಆಂಜನೇಯಃ ಸದಾ ಸ್ಥಿತಃ ।**
**ಶ್ವೇತಪುಷ್ಪೇಷು ಶಂಕರಃ ॥**

ಪಾರಿಜಾತಹೂಗಳು ಪರಮಾತ್ಮನಿಗೆ ಬಹಳ ಪ್ರೀತಿಕರವಾದದ್ದು. ಕಲ್ಪವೃಕ್ಷ ಎಂಬುದಾಗಿ ಕೇಳುತ್ತೇವೆಯಲ್ಲವೇ ? ಕೇಳಿದ್ದನ್ನೆಲ್ಲ ಕೊಡುವ ಕಲ್ಪವೃಕ್ಷ ಸ್ವರ್ಗದಲ್ಲಿದೆ ಎಂದು ಕೇಳುತ್ತೇವೆ. ಆ ಕಲ್ಪವೃಕ್ಷ ಅದು ಮಾವಿನಮರ ಅಲ್ಲ. ಅದು ಪಾರಿಜಾತವೃಕ್ಷ. ಆ ಪಾರಿಜಾತವೃಕ್ಷದ ಹೂಗಳ ಮೇಲೆ ಭಗವಂತಿನಗೆ ಬಹಳ ಪ್ರೀತಿ. ಹಾಗಾಗಿ ಆ ವಿಧವಾದ ಪಾರಿಜಾತಪುಷ್ಪಗಳ್ನು ಏರಿಸುವುದರಿಂದ ಪರಮಾತ್ಮನಿಗೆ ವಿಶೇಷವಾದ ಪ್ರೀತಿ ಉಂಟಾಗುತ್ತದೆ.

ಅಂತಹ ಪಾರಿಜಾತಹೂವುಗಳಲ್ಲಿ ವಾಯುದೇವರ ವಿಶೇಷ ಸನ್ನಿಧಾನ ಇರುತ್ತದೆ. ಉಳಿದ ಇನ್ನನೇಕ ಹೂವುಗಳಲ್ಲಿ ರುದ್ರದೇವರ ಸನ್ನಿಧಾನ ಇರುತ್ತದೆ.

ಭಗವಂತನ ಪಾದಗಳಿಗೆ ಹೂಗಳನ್ನು ಏರಿಸುತ್ತಾರೆ ಎಂಬ ಕಾರಣಕ್ಕೆ ಶ್ರೀನಿವಾಸನಿಗೆ ದಾಸರು ಕೇಳುತ್ತಾರೆ-

**ಶ್ರೀಗಂಧ ನಾನಾಗಿ ಹುಟ್ಟಿದರೆ....**

ನಾನೇ ಶ್ರೀಗಂಧವಾಗಿ ಹುಟ್ಟಿದರೆ, ದಿನಗಟ್ಟಲೆ ಕ್ಯೂ ನಲ್ಲಿ ನಿಂತು ದಬ್ಬಿಸಿಕೊಂಡು ಸರಿಯಾಗಿ ದರ್ಶನವಾಗದೇ ದುಃಖಪಡುವ ಪ್ರಸಂಗ ಇರುತ್ತಿರಲಿಲ್ಲ. ಯಾವಾಗಲೂ ನಿನ್ನ ಹಣೆಯ ಮೇಲೆಯೇ ಕೂಡಬಹುದಾಗಿತ್ತಲ್ಲ !

ಹಾಗೆ ದೇವತೆಗಳು ಕೇವಲ ಪ್ರಾರ್ಥನೆಯನ್ನು ಮಾಡಿಕೊಳ್ಳುವುದಿಲ್ಲ. ಕಿಂತು ಹೂವುಗಳಲ್ಲಿ ನಿಜವಾಗಿ ತಾವೇ ಸನ್ನಿಹಿತರಾಗಿದ್ದುಕೊಂಡು ಆ ವಿಧವಾಗಿ ವಿಶೇಷಸೇವೆಯನ್ನು ತಾವೇ ನಿಂತು ಮಾಡುತ್ತಾರೆ. ಅಂತಹ ಯೋಗ್ಯತೆ, ಅಧಿಕಾರ, ಸೌಭಾಗ್ಯ ದೇವತೆಗಳಿಗೆ ಉಂಟು. ಹೀಗಾಗಿ ದೇವರಿಗೆ ಪುಷ್ಪಗಳನ್ನು ಏರಿಸುವಾಗ, ಪಾರಿಜಾತಪುಷ್ಪಗಳಲ್ಲಿ ವಾಯುದೇವರ ವಿಶೇಷ ಸನ್ನಿಧಾನವನ್ನು, ಇತರ ಪುಷ್ಪಗಳಲ್ಲಿ ರುದ್ರದೇವರ ಸನ್ನಿಧಾನವನ್ನು ಚಿಂತಿಸುತ್ತಾ ಸಮರ್ಪಣೆ ಮಾಡಬೇಕು.

★★★

# ನಿರ್ಮಾಲ್ಯವನ್ನು ಶಿರಸಾ ಧರಿಸಬೇಕು

ದೇವರಪೂಜೆಯಲ್ಲಿ ದೇವರಿಗೆ ಶ್ರದ್ಧೆಯಿಂದ ಮಾಲೆಯನ್ನು ಸಮರ್ಪಣೆ ಮಾಡುವುದು ಎಷ್ಟು ಮಹತ್ವದ ವಿಷಯವೋ, ಅದೇ ರೀತಿಯಾಗಿ ದೇವರ ನಿರ್ಮಾಲ್ಯವನ್ನು (ದೇವರಿಗೆ ಸಮರ್ಪಿಸಿದ ಹೂವುಗಳನ್ನು) ಭಕ್ತಿಯಿಂದ ತಲೆಯಮೇಲೆ ಧಾರಣ ಮಾಡುವುದೂ ಅಷ್ಟೇ ಮಹತ್ವದ ವಿಷಯವಾಗಿದೆ.

ಅನ್ನುವುದಕ್ಕಾಗಿಯೇ ದೇವಪೂಜೆಯಲ್ಲಿ ನಿರ್ಮಾಲ್ಯ ವಿಸರ್ಜನೆ ಮಾಡುವಾಗ ಹೀಗೊಂದು ಅನುಸಂಧಾನ ಮಾಡುವುದುಂಟು -

**''ರುದ್ರಃ ದೇವಸ್ಯ ವಾಮಭಾಗೇ ಸ್ವಶಿರಸಿ ಪಾತ್ರಂ ಧೃತ್ವಾ ತಿಷ್ಠತಿ''**

ದೇವರ ನಿರ್ಮಾಲ್ಯವನ್ನು ನಾವು ಶ್ರದ್ಧೆಯಿಂದ ತಲೆಯಮೇಲೆ ಧಾರಣ ಮಾಡಬೇಕು ಎನ್ನುವುದಷ್ಟೇ ಅಲ್ಲ. ಕಿಂತು ದೇವರ ಮೇಲಿನ ನಿರ್ಮಾಲ್ಯವನ್ನು ವಿಸರ್ಜನೆ ಮಾಡುವಾಗ, ''ರುದ್ರದೇವರು ತಮ್ಮ ತಲೆಯ ಮೇಲೆ ಪಾತ್ರೆಯನ್ನು ಹಿಡಿದುಕೊಂಡು ದೇವರ ನಿರ್ಮಾಲ್ಯವನ್ನು ಧಾರಣ ಮಾಡುವುದಕ್ಕಾಗಿ ನಿಂತಿದ್ದಾರೆ'' ಎಂಬುದಾಗಿ ಅನುಸಂಧಾನ ಮಾಡುವ ಪದ್ಧತಿ ಇದೆ.

ಅಂದಮೇಲೆ ರುದ್ರಾದಿದೇವತೆಗಳೇ ದೇವರ ನಿರ್ಮಾಲ್ಯವನ್ನು ತಲೆಯ ಮೇಲೆ ಧಾರಣ ಮಾಡಲು ಕಾಯುತ್ತಲಿರುತ್ತಾರೆ ಎಂದಮೇಲೆ, ನಮ್ಮಂತಹ ಮನುಜರು ದೇವರ ನಿರ್ಮಾಲ್ಯವನ್ನು ಭಕ್ತಿಯಿಂದ ಶಿರಸಾ ಧರಿಸಬೇಕು ಎಂದು ಪ್ರತ್ಯೇಕ ಏನು ಹೇಳುವುದು ? ದೇವರ ನಿರ್ಮಾಲ್ಯಕ್ಕೆ ಅಷ್ಟು ಮಹತ್ವ ನೀಡಬೇಕು ಎಂದು ತಾತ್ಪರ್ಯ.

ದೇವರಿಗೆ ಸಮರ್ಪಿಸಿದ ಹೂವುಗಳನ್ನು ಭಕ್ತಿಯಿಂದ ತಲೆಯಮೇಲೆ ಧರಿಸುವುದರಿಂದ ಎಲ್ಲವಿಧ ಮಾಯೆ ದೂರವಾಗುತ್ತದೆ ಎಂಬ ವಿಚಾರವನ್ನು ಶ್ರೀಮದ್ಭಾಗವತ ತಿಳಿಸುತ್ತದೆ -

**ತ್ವಯೋಪಭುಕ್ತಸ್ರಗ್ಗಂಧವಾಸೋಲಂಕಾರಚರ್ಚಿತಾಃ ।**
**ಉಚ್ಚಿಷ್ಟಭೋಜಿನೋ ದಾಸಾಃ ತವ ಮಾಯಾಂ ಜಯೇಮಹಿ ॥**

ಪರಮಾತ್ಮನ ಮಾಯೆಯನ್ನು ದಾಟಬೇಕಾದರೆ ಅದಕ್ಕಿರುವ ಒಂದೇ ಉಪಾಯ ಹರಿನಿರ್ಮಾಲ್ಯಧಾರಣೆ. ಪರಮಾತ್ಮನಿಗೆ ಏರಿಸಿದ ಹೂವು, ಸಮರ್ಪಿಸಿದ (ದೇವರು ಭೋಗ ಮಾಡಿದ) ಗಂಧ, ಭಗವಂತ ತಿಂದುಬಿಟ್ಟ ನೈವೇದ್ಯ (ಉಚ್ಚಿಷ್ಟ) ಅದನ್ನು ಭಕ್ತಿಯಿಂದ ಸ್ವೀಕಾರ ಮಾಡಿದರೆ ಭಗವಂತನ ಎಲ್ಲವಿಧವಾದ ಮಾಯೆ ದೂರವಾಗುತ್ತದೆ. ಆಸುರೀಮಾಯೆಗಳ ಪ್ರಭಾವ ನಮ್ಮ ಮೇಲೆ ಆಗುವುದಿಲ್ಲ.

★★★

# ನಿರ್ಮಾಲ್ಯ ತಿರಸ್ಕಾರ ಅನರ್ಥಕಾರಿ

ದೇವರ ನಿರ್ಮಾಲ್ಯವನ್ನು ಭಕ್ತಿಯಿಂದ ತಲೆಯಮೇಲೆ ಧಾರಣ ಮಾಡಬೇಕಾದದ್ದು ಎಷ್ಟು ಮಹತ್ವದ್ದೋ, ಹಾಗೆ ದೇವರ ನಿರ್ಮಾಲ್ಯವನ್ನು ತಿರಸ್ಕಾರ ಮಾಡದಿರುವುದೂ ಅಷ್ಟೇ ಮಹತ್ವದ್ದು. ದೇವರ ನಿರ್ಮಾಲ್ಯಧಾರಣ ಮಾಡಿದರೆ ಮಹಾಪ್ರಯೋಜನ ಹೇಗುಂಟೋ, ಹಾಗೆ ನಿರ್ಮಾಲ್ಯತಿರಸ್ಕಾರ ಮಾಡಿದರೆ ಮಹಾಅನರ್ಥವೂ ಉಂಟು.

**ಇಂದ್ರದೇವರೇ ಇದಕ್ಕೆ ದೃಷ್ಟಾಂತ !**

ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಆಚಾರ್ಯರು ಈ ಕಥೆಯನ್ನು ಉಲ್ಲೇಖಿಸುತ್ತಾರೆ.

ಇಂದ್ರದೇವರು ಮೂರುಲೋಕಗಳಿಗೆ ಒಡೆಯರಾದವರು. ಎಲ್ಲ ದೇವತೆಗಳಿಗೆ ಅಧಿಪತಿಗಳು. ದೇವೇಂದ್ರಸಿಂಹಾಸನವನ್ನು ಅಲಂಕರಿಸಿದವರು. ಒಮ್ಮೆ ಇಂದ್ರದೇವರು ಪರಿವಾರ ಸಮೇತರಾಗಿ ತಮ್ಮ ನೆಚ್ಚಿನ ಆನೆ ಐರಾವತದ ಮೇಲೆ ಕುಳಿತು ದಾರಿಯಲ್ಲಿ ಬರುವಾಗ ದೂರ್ವಾಸರು ಭೇಟಿಯಾಗುತ್ತಾರೆ.

ದೂರ್ವಾಸರು ಇಂದ್ರದೇವರಿಗೆ ದೇವರ ನಿರ್ಮಾಲ್ಯವನ್ನು ಕೊಡುತ್ತಾರೆ. ಎಂತಹ ನಿರ್ಮಾಲ್ಯ ? ಹಿರಿಯರು, ಜ್ಞಾನಿಗಳು ಪೂಜೆ ಮಾಡಿದಾಗ ನಮಗಿಂತ ಅತಿಹೆಚ್ಚು ಭಕ್ತಿಯಿಂದ ಹೆಚ್ಚು ಅನುಸಂಧಾನಪೂರ್ವಕವಾಗಿ ಪೂಜೆ ಮಾಡುವುದನ್ನು

ಕಾಣುತ್ತೇವೆ. ಪ್ರಕೃತ ದೂರ್ವಾಸರು ದೇವರಪೂಜೆ ಮಾಡಿದ್ದಾರೆ. ದೂರ್ವಾಸರು ರುದ್ರಾಂಶಸಂಭೂತರು. ಮನಸ್ಸಿಗೆ ಅಭಿಮಾನಿಗಳು. ಪರಮವೈಷ್ಣವರು. ಸರ್ವಜ್ಞಕಲ್ಪರು. ಭಗವಂತನ ಏಕಾಂತಭಕ್ತರು. ಎಲ್ಲ ದೇವತೆಗಳಲ್ಲಿ ಶ್ರೇಷ್ಠರಾದವರು. ಅಂತಹ ಮನೋಭಿಮಾನಿಗಳಾದ ರುದ್ರದೇವರು ಎಷ್ಟು ಭಕ್ತಿಯಿಂದ ಪೂಜೆ ಮಾಡಿರಬಹುದು ? ಊಹಿಸಿಕೊಳ್ಳಿ !

ಮನಸ್ಸಿನ ಅಧಿದೇವತೆಗಳಾದ ಅವರು ಸಂಪೂರ್ಣವಾದ ಮನಸ್ಸನ್ನು ಭಗವಂತನಲ್ಲಿ ಇಟ್ಟು, ಅತ್ಯಂತ ಅನುಸಂಧಾನ ಪೂರ್ವಕವಾಗಿ, ಅತಿಭಕ್ತಿಪರವಶರಾಗಿ ಭಗವಂತನ ಪೂಜೆಯನ್ನು ಮಾಡಿದ್ದಾರೆ. ಭಗವಂತನಿಗೆ ಪುಷ್ಪಗಳನ್ನು ಸಮರ್ಪಣೆ ಮಾಡಿದ್ದಾರೆ. ದೂರ್ವಾಸರು ಪರಮಭಕ್ತಿಯಿಂದ ಹೂವುಗಳನ್ನು ಸಮರ್ಪಿಸಿದರೆ, ಸಾಕ್ಷಾತ್ ಲಕ್ಷ್ಮೀ-ಬ್ರಹ್ಮಾದಿ ದೇವತೆಗಳೇ ಬಂದು ಆ ಹೂವುಗಳಲ್ಲಿ ಸನ್ನಿಹಿತರಾಗಿದ್ದಾರೆ.

ಅಂತಹ ಶ್ರೇಷ್ಠವಾದ ವಿಷ್ಣುನಿರ್ಮಾಲ್ಯವನ್ನು ದೇವೇಂದ್ರನಿಗೆ ಕೊಡುತ್ತಾರೆ ದೂರ್ವಾಸರು.

**ತ್ವಯೋಪಭುಕ್ತಸ್ರಗ್ಗಂಧ-**
**ವಾಸೋಲಂಕಾರಚರ್ಚಿತಾಃ ।**
**ಉಚ್ಛಿಷ್ಟಭೋಜಿನೋ ದಾಸಾಃ**
**ತವ ಮಾಯಾಂ ಜಯೇಮಹಿ ॥**

ಎಂಬುದಾಗಿ ಶ್ರೀಮದ್ಭಾಗವತ ತಿಳಿಸುವಂತೆ, ಪರಮಾತ್ಮನ ಮಾಯೆಯನ್ನು ದಾಟಬೇಕಾದರೆ ಅದಕ್ಕಿರುವ ಒಂದೇ ಉಪಾಯ ಹರಿನಿರ್ಮಾಲ್ಯಧಾರಣೆ. ಪರಮಾತ್ಮನಿಗೆ ಏರಿಸಿದ ಹೂವು, ಸಮರ್ಪಿಸಿದ (ದೇವರು ಭೋಗ ಮಾಡಿದ) ಗಂಧ, ಭಗವಂತ ತಿಂದುಬಿಟ್ಟ ನೈವೇದ್ಯ (ಉಚ್ಚಿಷ್ಟ) ಅದನ್ನು ಭಕ್ತಿಯಿಂದ ಸ್ವೀಕಾರ ಮಾಡಿದರೆ, ಅವನ ಎಲ್ಲವಿಧವಾದ ಮಾಯೆ ದೂರವಾಗುತ್ತದೆ. ಯಾವ ಆಸುರೀಮಾಯೆಯೂ ನಮ್ಮನ್ನು ಏನೂ ಮಾಡುವುದಿಲ್ಲ.

ಹೇ ದೇವೇಂದ್ರ ! ಈ ವಿಷ್ಣುನಿರ್ಮಾಲ್ಯವನ್ನು ಸ್ವೀಕಾರ ಮಾಡು. ಇದರಿಂದ ಎಲ್ಲವಿಧವಾದ ಮಾಯೆಗಳೂ ದೂರವಾಗುತ್ತವೆ. ನಿನ್ನ ವೈರಿಗಳೆಲ್ಲರೂ ಮಾಯಾವಿಗಳೇ. ಅಸುರರು ನಿನ್ನ ಶತ್ರುಗಳು. ಅವರೆಲ್ಲ ಮಹಾಮಾಯಾವಿಗಳು. ಯಾವಾಗಲೂ ದುಷ್ಟವಾದ ಮಾಯೆಯನ್ನೇ ಮಾಯಾಜಾಲವನ್ನೇ ಹಾಕುವವರು. ಅಂತಹ ಮಾಯಾಜಾಲವನ್ನು ದಾಟಬೇಕಾದರೆ ವಿಷ್ಣುನಿರ್ಮಾಲ್ಯ ಅತ್ಯಗತ್ಯ ಎಂಬುದಾಗಿ ತಾವು ಭಗವಂತನಿಗೆ ಸಮರ್ಪಿಸಿದ ದೇವರ ನಿರ್ಮಾಲ್ಯವನ್ನು ಇಂದ್ರನಿಗೆ ಕೊಡುತ್ತಾರೆ ದೂರ್ವಾಸರು.

ಇಂದ್ರದೇವರು ಮಾಡಿದ್ದೇನು ? ದೂರ್ವಾಸರು ಕೊಟ್ಟ ವಿಷ್ಣುನಿರ್ಮಾಲ್ಯವನ್ನು ಭಕ್ತಿಯಿಂದ ತಲೆಯಮೇಲೆ ಧರಿಸಬೇಕಿತ್ತು. ಆದರೆ ಇಂದ್ರದೇವರು ತಾವು ಆ

ನಿರ್ಮಾಲ್ಯವನ್ನು ಧಾರಣ ಮಾಡದೇ, ತಾವು ಕುಳಿತಂತಹ ಐರಾವತ ಆನೆಗೆ ಅದನ್ನು ನೀಡುತ್ತಾರೆ.

ಅದು (ಐರಾವತ) ಹೇಳಿಕೇಳಿ ಆನೆ. ಮದ ಮೈತುಂಬಿದ ಪ್ರಾಣಿ. ಉನ್ಮತ್ತತನದ ಉನ್ನತಮಟ್ಟ ತಲುಪಿದ ಪ್ರಾಣಿ. ಇಂದ್ರ ನೀಡಿದ ಆ ನಿರ್ಮಾಲ್ಯವನ್ನು ಸೊಂಡಲಿನಿಂದ ತೆಗೆದುಕೊಂಡು ಕಾಲಿನಡಿಯಲ್ಲಿ ಹಾಕಿ ತುಳಿದುಬಿಟ್ಟಿತು.

**ಸ್ವದತ್ತಮಾಲಾಭುವಿಪಾತಕೋಪತಃ**
**ದೂರ್ವಾಸಸಃ ಶಾಪತ ಆಶು ಹಿ ಶ್ರಿಯಾ ।**
**ಶಕ್ರೇ ವಿಹೀನೇ ದಿತಿಜೈಃ ಪರಾಜಿತೇ**
**ಪುರಾ ವಯಂ ತ್ವಾಂ ಶರಣಂ ಗತಾಃ ಸ್ಮಃ ॥**
**(ಮ.ಭಾ.ತಾ.ನಿ ಅ-10)**

ಕೋಪಕ್ಕೆ ಮತ್ತೊಂದು ಹೆಸರು ದೂರ್ವಾಸರು. ಅವರ ಕೋಪ ನಿರರ್ಥಕವಲ್ಲ. ಶಾಸ್ತ್ರಕ್ಕೆ ವಿರುದ್ಧವಾಗಿ ಯಾರೇ ನಡೆದುಕೊಂಡರೂ ಕೋಪ ತೋರಿಸಿ ತಕ್ಕ ಶಾಸ್ತಿ ಮಾಡುವ ದೀಕ್ಷೆ ದೂರ್ವಾಸರದ್ದು. ಭಕ್ತಿಯಿಂದ ತಾವು ಭಗವಂತನಿಗೆ ಸಮರ್ಪಣೆ ಮಾಡಿದ ನಿರ್ಮಾಲ್ಯವನ್ನು ನಿನಗೆ ನೀಡಿದರೆ, ಅದನ್ನು ತಲೆಯಮೇಲೆ ಧರಿಸದೇ ಆನೆಗೆ ಕೊಟ್ಟು ಕಾಲಲ್ಲಿ ಹಾಕಿ ತುಳಿಸುತ್ತೀಯಾ ? ದೇವರ ನಿರ್ಮಾಲ್ಯಕ್ಕೆ ತಿರಸ್ಕಾರ ಮಾಡುತ್ತೀಯಾ ? ಎಂಬುದಾಗಿ ಕ್ರುದ್ಧರಾಗಿ, ಯಾವ

ಐಶ್ವರ್ಯದ ಮದದಿಂದ ಈ ರೀತಿ ವಿಷ್ಣುನಿರ್ಮಾಲ್ಯಕ್ಕೆ ಅಪಮಾನ ಮಾಡಿದ್ದೀಯೋ ಆ ಐಶ್ವರ್ಯವೇ ನಿನ್ನಿಂದ ದೂರವಾಗಲಿ, ನೀನು ಐಶ್ವರ್ಯಭ್ರಷ್ಟನಾಗು ಎಂಬುದಾಗಿ ದೂರ್ವಾಸರು ಇಂದ್ರನಿಗೆ ಶಾಪ ನೀಡುತ್ತಾರೆ.

ದೂರ್ವಾಸರು ಕೊಟ್ಟ ಶಾಪ ದೈತ್ಯರಿಗೆ ವರವಾಗಿ ಪರಿಣಮಿಸಿತು. ಇದೇ ಸುಸಮಯ ಎಂದು ದೈತ್ಯರು ಸ್ವರ್ಗದ ಮೇಲೆ ಆಕ್ರಮಣ ಮಾಡಿ, ವಿಜಯ ಸಾಧಿಸಿದರು. ದೇವರ ನಿರ್ಮಾಲ್ಯಕ್ಕೆ ಅಪಮಾನ ಮಾಡಿದ ಪರಿಣಾಮ ಇಂದ್ರದೇವರಿಗೆ ಸ್ವರ್ಗಲೋಕಾಧಿಪತ್ಯವನ್ನೇ ಕಳೆದುಕೊಳ್ಳಬೇಕಾದ ಪ್ರಸಂಗ ಎದುರಾಯಿತು.

ತಿಳಿಯಬೇಕಾದ ತಾತ್ಪರ್ಯ :- ಯಾವುದೇ ನಿಮಿತ್ತದಿಂದಲೂ ದೇವರ ನಿರ್ಮಾಲ್ಯವನ್ನು ತಿರಸ್ಕರಿಸಬಾರದು. ಐಶ್ವರ್ಯದ ಮದ, ಅಧಿಕಾರದ ದರ್ಪ, ವಿದ್ಯೆಯ ಉನ್ಮತ್ತತೆ ಹೀಗೆ ತಿರಸ್ಕಾರ ಮಾಡಲು ಅನೇಕ ಕಾರಣಗಳು. ಐಶ್ವರ್ಯದ ಮದದಿಂದ ನಿರ್ಮಾಲ್ಯವನ್ನು ತಿರಸ್ಕರಿಸಿದರೆ, ಐಶ್ವರ್ಯ ಭ್ರಷ್ಟರಾಗುವುದು ಖಚಿತ. ಅಧಿಕಾರದ ದರ್ಪದಿಂದ ನಿರ್ಮಾಲ್ಯವನ್ನು ತಿರಸ್ಕರಿಸಿದರೆ, ಅಧಿಕಾರದಿಂದ ಚ್ಯುತರಾಗುವುದು ನಿಶ್ಚಿತ. ವಿದ್ಯೆಯ ಉನ್ಮತ್ತತೆಯಿಂದ ನಿರ್ಮಾಲ್ಯವನ್ನು ತಿರಸ್ಕರಿಸಿದರೆ, ಎಲ್ಲರಿಂದ ನಿಂದ್ಯರಾಗುವುದು

ಸುದೃಢ. ಆದ್ದರಿಂದ ದೇವರ ನಿರ್ಮಾಲ್ಯವನ್ನು ಭಕ್ತಿಯಿಂದ ತಲೆಯಮೇಲೆ ಧರಿಸಬೇಕೇ ಹೊರತು, ಎಂದಿಗೂ ತಿರಸ್ಕರಿಸಬಾರದು.

ಬಹಳ ಗಮನ ಕೊಟ್ಟು ಕೇಳಬೇಕಾದ ವಿಷಯ :- ಇಂದ್ರದೇವರ ಈ ಕಥಾಭಾಗವನ್ನು ಕಂಡಾಗ, ಎಂತಹ ದೊಡ್ಡಸ್ಥಾನದಲ್ಲಿರುವವರಿಗೂ ಸಹ ಎಂತಹ ಸಣ್ಣ ಅಪರಾಧವನ್ನು ಮಾಡುವುದರಿಂದಲೂ ಕೂಡ ಎಂತಹ ದೊಡ್ಡ ಶಿಕ್ಷೆಯಾಗುತ್ತದೆ ? ಇನ್ನು ಸಣ್ಣವರೇ ಇದ್ದಾಗ, ನಮ್ಮಂತಹ ಸಣ್ಣವರು ದೊಡ್ಡ ದೊಡ್ಡ ಅಪರಾಧಗಳನ್ನು ಮಾಡಿದಾಗ ನಮಗೆ ಇನ್ನೆಂತಹ ಶಿಕ್ಷೆ ಆಗಲಿಕ್ಕಿಲ್ಲ ? ಎಂಬ ಎಚ್ಚರ, ಒಂದು ಜಾಗರೂಕತೆ ನಮ್ಮಲ್ಲಿ ಇರಬೇಕು.

★★★



# ಮಾಲಾಸಮರ್ಪಣೆಯಿಂದ ಅನ್ನಪ್ರಾಪ್ತಿ

ಈ ವಿಧವಾಗಿ ದೇವರಿಗೆ ಹೂವುಗಳನ್ನು ಸಮರ್ಪಿಸುವುದರಿಂದ, ಅಥವಾ ಹೂವುಗಳನ್ನು ಕಟ್ಟಿ ಮಾಲೆ ಮಾಡಿಕೊಂಡು ಮಾಲೆಯನ್ನು ಸಮರ್ಪಿಸುವುದರಿಂದ ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಅವನಿಗೆ ವಿಶೇಷವಾಗಿ ಅನ್ನಲಾಭವಾಗುತ್ತದೆ ಎನ್ನುವುದು ರಹಸ್ಯಪ್ರಮೇಯವಾಗಿದೆ.

**ದೇವಾಯ ಮಾಲಾಸಮರ್ಪಣೇನ ಅನ್ನಲಾಭೋ ಭವತೀತಿ ಪರಮರಹಸ್ಯಮ್ । ಅತ ಏವ ಅನ್ನಪ್ರಾಪ್ತಿಕಾಮುಕೇನ ಶ್ವೇತರಾಜೇನ ಬ್ರಹ್ಮವಚನಾತ್ ಅಗಸ್ತ್ಯಮುಖಾದ್ಧಾಪಿತಾಂ ಮಾಲಾಂ ಪರಿಗೃಹ್ಯ ಶ್ರೀರಾಮಃ ತಸ್ಯಾನ್ನಪ್ರಾಪ್ತಿಂ ಕೃತವಾನಿತಿ ಕಥಾ (9-22-25) ಶ್ರೀಮದ್ಭಾರತತಾತ್ಪರ್ಯನಿರ್ಣಯೇ ವ್ಯಕ್ತಾ । (ಪದ್ಯಮಾಲಾವ್ಯಾಖ್ಯಾನ - ಪೂಜಾಕಲ್ಪಲತಾ)**

ಶ್ವೇತ ಎಂಬ ರಾಜನ ಇತಿಹಾಸವನ್ನು ಉಲ್ಲೇಖಿಸುತ್ತಾ ಶ್ರೀಮದಾನಂದತೀರ್ಥರು ತಮ್ಮ ಶ್ರೀಮಹಾಭಾರತ-ತಾತ್ಪರ್ಯನಿರ್ಣಯದಲ್ಲಿ ಈ ಪ್ರಮೇಯವನ್ನು ತಿಳಿಸುತ್ತಾರೆ -

**ಶ್ವೇತದತ್ತಾಂ ತಥಾ ಮಾಲಾಮಗಸ್ತ್ಯಾದಾಪ ರಾಘವಃ ।**
**ಅನನ್ನಯಜ್ಞಕೃಚ್ಛ್ವೇತೋ ರಾಜಾ ಕ್ಷುದ್ವಿನಿವರ್ತನಮ್ ।**

**ಕುರ್ವನ್ ಸ್ವಮಾಂಸೈರ್ಧಾತ್ರೋಕ್ತೋ**
**ಮಾಲಾಂ ರಾಮಾರ್ಥಮಾರ್ಪಯತ್ ।**

ಅಗಸ್ತ್ಯಾಯ ನ ಸಾಕ್ಷಾತ್ತು
ರಾಮೇ ದದ್ಯಾದಯಂ ನೃಪಃ ॥

ಕ್ಷುದಭಾವಮಾತ್ರಫಲದಂ
ನ ಸಾಕ್ಷಾದ್ರಾಘವೇಽರ್ಪಿತಮ್ ।
ಕ್ಷುದಭಾವಮಾತ್ರಮಾಕಾಂಕ್ಷನ್
ಮಾಮಸೌ ಪರಿಪೃಚ್ಛತಿ ॥

ವ್ಯವಧಾನತಸ್ತತೋ ರಾಮೇ
ದದ್ಯಾಚ್ಛ್ವೇತ ಇತಿ ಪ್ರಭುಃ ।
ಮತ್ವಾ ಬ್ರಹ್ಮಾಽದಿಶನ್ಮಾಲಾಂ
ಪ್ರದಾತುಂ ಕುಂಭಯೋನಯೇ ॥

ತಾಮಗಸ್ತ್ಯಕರಪಲ್ಲವಾರ್ಪಿತಾಂ
ಭಕ್ತ ಏಷ ಮಮ ಕುಂಭಸಂಭವಃ ।
ಇತ್ಯವೇತ್ಯ ಜಗೃಹೇ ಜನಾರ್ದನ-
ಸ್ತೇನ ಸಂಸ್ತುತ ಉಪಾಗಮತ್ ಪುರಮ್ ॥

(ಮ.ಭಾ.ತಾ.ನಿ 9-22,26)

### ಶ್ವೇತರಾಜನ ಹಸಿವಿನ ಬಾಧೆ

ಹಿಂದೆ ಶ್ವೇತ ಎಂಬ ಓರ್ವ ರಾಜ. ಬಹಳ ಧಾರ್ಮಿಕ. ಅವನು ಅನೇಕ ಯಜ್ಞಗಳನ್ನು ಆಚರಿಸಿದ. ಅದರ ಫಲವಾಗಿ ಅವನಿಗೆ ಬ್ರಹ್ಮಲೋಕ ಲಭಿಸಿತು. ಆದರೆ ಬ್ರಹ್ಮಲೋಕದಲ್ಲಿ ವಾಸವಿದ್ದರೂ ಅಲ್ಲಿ ಅವನಿಗೆ ಹಸಿವಿನ ಬಾಧೆ ತೀವ್ರವಾಗಿತ್ತು.

ಅದಕ್ಕೆ ಕಾರಣ- ಅವನು ರಾಜನಾಗಿದ್ದಾಗ ಸಾಕಷ್ಟು ಯಜ್ಞಗಳನ್ನು ಆಚರಿಸಿದ್ದರೂ ಸಹ ಆ ಯಜ್ಞಗಳಲ್ಲಿ ಅನ್ನದಾನವನ್ನು ಮಾತ್ರ ಮಾಡಿರಲಿಲ್ಲ.

ಗೀತೆಯಲ್ಲಿ ಭಗವಂತ ಎಚ್ಚರಿಕೆ ನೀಡುತ್ತಾನೆ -

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥**

**(ಗೀತಾ 17-13)**

ಯಜ್ಞಗಳನ್ನು ಮಾಡಿದರೂ ವಿಧ್ಯುಕ್ತರೀತಿಯಲ್ಲಿ ಮಾಡದಿದ್ದರೆ, ಬಂದ ಬ್ರಾಹ್ಮಣರಿಗೆ ಅನ್ನದಾನ ಮಾಡದಿದ್ದರೆ, ಮಂತ್ರಗಳೇ ಇಲ್ಲದೇ ಯಜ್ಞ ಮಾಡಿದರೆ, ಋತ್ವಿಜರಿಗೆ ಬ್ರಾಹ್ಮಣರಿಗೆ ದಕ್ಷಿಣೆ ಕೊಡದೇ ಯಜ್ಞ ಮಾಡಿದರೆ, ಶ್ರದ್ಧೆಯೇ ಇಲ್ಲದೇ ಮಾಡಿದರೆ ಅಂತಹ ಯಜ್ಞವು ತಾಮಸಯಜ್ಞ ಎನಿಸುತ್ತದೆ ಎನ್ನುತ್ತಾನೆ.

ಹಾಗಾಗಿ ಯಜ್ಞದಲ್ಲಿ ಅನ್ನದಾನ ಬಹಳ ಮಹತ್ವದ್ದು. ಈ ಶ್ವೇತರಾಜ ವೈಭವದಿಂದ ಯಜ್ಞ ಮಾಡಿ, ಋತ್ವಿಜರಿಗೆ ಬ್ರಾಹ್ಮಣರಿಗೆ ಕೇವಲ ದಕ್ಷಿಣೆಯನ್ನು ಕೊಟ್ಟು ಕಳುಹಿಸಿದ. ಯಾರಿಗೂ ಊಟಕ್ಕೆ ಹಾಕಲಿಲ್ಲ. ಅನ್ನದಾನ ಮಾಡದೇ ಯಜ್ಞ ಮಾಡಿದ್ದಕ್ಕಾಗಿ ಬ್ರಹ್ಮಲೋಕದಲ್ಲಿದ್ದರೂ ಅವನಿಗೆ ಹಸಿವಿನ ಬಾಧೆ ತಪ್ಪಲಿಲ್ಲ. ಏನು ತಿಂದರೂ ಹಸಿವು ನೀಗುತ್ತಿಲ್ಲ.

**ತನ್ನ ಮಾಂಸವನ್ನೇ ಕಿತ್ತು ತಿನ್ನುತ್ತಾನೆ !**

ಒಮ್ಮೆ ಭೂಮಿಯಲ್ಲಿ ಒಂದು ಸರೋವರದ ದಡಕ್ಕೆ ಬಂದಾಗ, ಅಲ್ಲಿ ತಾನು ಹಿಂದೆ ರಾಜನಾಗಿದ್ದಾಗ ಆ ಕ್ಷತ್ರಿಯದೇಹವನ್ನು ಆ ಸರೋವರದ ಸಮೀಪ ಬಿಟ್ಟಿದ್ದು ಗಮನಕ್ಕೆ ಬಂದು, ಕೊನೆಗೆ ತನ್ನ ಆ ಹಿಂದಿನ ಜನ್ಮದ ದೇಹವನ್ನೇ ಕಿತ್ತು ತನ್ನ ದೇಹದ ಮಾಂಸವನ್ನೇ ತಿನ್ನುತ್ತಾನೆ. ಅಷ್ಟು ಅವನ ಹಸಿವಿನ ಬಾಧೆ. ಕೊನೆಗೆ ಹಸಿವು ತಡೆಯಲಾಗದೇ ಬ್ರಹ್ಮದೇವರಿಗೆ ಶರಣುಹೋದ. ಹೇಗಾದರೂ ಮಾಡಿ ತನ್ನ ಹಸಿವಿನ ದುಃಖವನ್ನು ಉಪಶಮನ ಮಾಡಬೇಕೆಂದು ಯಾಚಿಸಿದ. ವಿಷಯವನ್ನು ಅರಿತ ಬ್ರಹ್ಮದೇವರು ''ಭೂಮಿಯಲ್ಲಿ ರಾಮಾವತಾರವಾಗಿದೆ. ಅಗಸ್ತ್ಯರ ಮೂಲಕ ಒಂದು ಮಾಲೆಯನ್ನು ರಾಮದೇವರಿಗೆ ಸಮರ್ಪಣೆ ಮಾಡು. ಅದರಿಂದ ನಿನ್ನ ಹಸಿವಿನ ಬಾಧೆ ಪರಿಹಾರವಾಗುತ್ತದೆ'' ಎಂಬುದಾಗಿ ಸಲಹೆ ನೀಡುತ್ತಾರೆ. ಬ್ರಹ್ಮದೇವರ ಆದೇಶದಂತೆ ಶ್ವೇತರಾಜ ಅಗಸ್ತ್ಯರ ಮುಖಾಂತರ ರಾಮದೇವರಿಗೆ ಮಾಲೆಯನ್ನು ಅರ್ಪಿಸುತ್ತಾನೆ. ಅಗಸ್ತ್ಯರು ಕೊಟ್ಟ ಮಾಲೆಯನ್ನು ರಾಮದೇವರು ಸ್ವೀಕಸಿದ ಕ್ಷಣದಲ್ಲಿಯೇ ಶ್ವೇತರಾಜನ ಹಸಿವಿನ ಬಾಧೆ ತೀರಿಹೋಗುತ್ತದೆ.

ಹಾಗಾದರೆ - ಭಗವಂತನಿಗೆ ಮಾಲೆಯನ್ನು ಸಮರ್ಪಿಸುವುದರಿಂದ ವಿಶೇಷವಾಗಿ ಅನ್ನಲಾಭ ಉಂಟಾಗುತ್ತದೆ ಎಂಬ ತತ್ವ ಈ ಕಥೆಯಿಂದ ಸೂಚಿತವಾಗಿದೆ.

**ಅಗಸ್ತ್ಯರ ಮೂಲಕ ಏಕೆ ಕೊಡಿಸಿದರು ?**

ಈ ಶ್ವೇತರಾಜ ಹಸಿವಿನ ಬಾಧೆಯ ಪರಿಹಾರವನ್ನು ಮಾತ್ರ ಪ್ರಾರ್ಥಿಸಿರುವುದರಿಂದ "ನೀನೇ ನೇರವಾಗಿ ರಾಮದೇವರಿಗೆ ಮಾಲೆ ಕೊಡಬೇಡ. ನೀನು ಅಗಸ್ತ್ಯರಿಗೆ ಕೊಡು. ಅಗಸ್ತ್ಯರು ರಾಮನಿಗೆ ಕೊಡಲಿ" ಎಂದು ಆದೇಶವಿತ್ತರು ಬ್ರಹ್ಮದೇವರು.

ಅದಕ್ಕೆ ಕಾರಣ - ಒಂದುವೇಳೆ ಶ್ವೇತರಾಜನೇ ನೇರವಾಗಿ ರಾಮದೇವರಿಗೆ ಮಾಲೆಯನ್ನು ಅರ್ಪಿಸಿದರೆ, ಅದರ ಫಲವಾಗಿ ಇವನಿಗೆ ಜ್ಞಾನದ್ವಾರಾ ಮೋಕ್ಷವೇ ಆಗಬೇಕು. ಆದರೆ ಪ್ರಕೃತ ಇವನು ಕೇಳಿರುವುದು ಕೇವಲ ಹಸಿವಿನ ಬಾಧೆ ಪರಿಹಾರ. ಅದಕ್ಕಾಗಿ ಅಗಸ್ತ್ಯರ ಮೂಲಕ ಕೊಡಿಸಿದರು ಬ್ರಹ್ಮದೇವರು.

ಇದರಿಂದ ನಮಗೆ ತಿಳಿಸುವುದೇನು ? ಪ್ರತಿನಿತ್ಯ ನಾವು ದೇವರಿಗೆ ನಾವೇ ನೇರವಾಗಿ ಮಾಲೆಯನ್ನು ಸಮರ್ಪಣೆ ಮಾಡಿದರೆ, (ಅನ್ನಲಾಭ ಅವಾಂತರಫಲವಾದರೆ) ಉತ್ತಮವಾದ ತತ್ವಜ್ಞಾನದ ಮೂಲಕ ಮೋಕ್ಷರೂಪಫಲವೇ ಮುಖ್ಯವಾಗಿ ದೊರೆಯುವುದು ಎಂಬ ಪ್ರಮೇಯವನ್ನೂ ಇಲ್ಲಿ ಸೂಚಿಸುತ್ತಿದ್ದಾರೆ.

ಪ್ರತಿನಿತ್ಯ ದೇವರಿಗೆ ಮಾಲೆಯನ್ನು (ಪುಷ್ಪಗಳನ್ನು) ಸಮರ್ಪಣೆ ಮಾಡುವುದರಿಂದ ಎಂತಹ ಫಲ ಸಿಗುತ್ತದೆ ! ಅಲ್ಲವೇ ?

★★★



# ಶಾಸ್ತ್ರಾಧ್ಯಯನದಿಂದ ಜೀರ್ಣವಾಗುವ ಅನ್ನ ಕೊಡು

**ಈಶಾವಾಸ್ಯಮಿದಂ ಸರ್ವಂ**
**ಯತ್ಕಿಂಚ ಜಗತ್ಯಾಂ ಜಗತ್ ।**

ಎಂಬುದಾಗಿ ಹೇಳಿದಂತೆ, ದೇವರೇ ಕೊಟ್ಟಂತಹ ವಸ್ತುವನ್ನು ದೇವರಿಗೇ ಸಮರ್ಪಣೆ ಮಾಡುವುದು ದೇವಪೂಜೆ. ಹಾಗಾಗಿ ''ಸುಗಂಧಮಯವಾದ ನಾನಾವಿಧವಾದ ಹೂವುಗಳನ್ನು ಕೊಟ್ಟಿದ್ದಿ. ಅದು ನಿನ್ನದೇ ಸೃಷ್ಟಿ. ನಿನ್ನದೇ ಹೂವುಗಳು. ನಿನಗೇ ಅರ್ಪಿತವಾಗಲಿ'' ಎಂಬ ಅನುಸಂಧಾನದಿಂದ, ಪರಮಾತ್ಮನಿಗೆ ಪ್ರತಿನಿತ್ಯ ಪುಷ್ಪಗಳನ್ನು ಸಮರ್ಪಣೆ ಮಾಡುವುದರಿಂದ ವಿಶೇಷವಾಗಿ ಅನ್ನಪ್ರಾಪ್ತಿಯಾಗುತ್ತದೆ. ಭಗವಂತ ಸಮೃದ್ಧವಾಗಿ ಅನ್ನ ನೀಡುತ್ತಾನೆ. ನಮ್ಮ ಮನೆಯಲ್ಲಿ ಎಂದಿಗೂ ಅನ್ನದ ಕೊರತೆ ಉಂಟಾಗುವುದಿಲ್ಲ ಎಂಬುದಾಗಿ ತಿಳಿದಾಗ, ನಾವು ಪರಮಾತ್ಮನಿಗೆ ಒಂದು ವಿಶೇಷವಾದ ಪ್ರಾರ್ಥನೆಯನ್ನು ಮಾಡಬೇಕು.

ನಾನು ನಿನಗೆ ಪುಷ್ಪಗಳನ್ನು ಸಮರ್ಪಿಸಿದ್ದರ ಫಲವಾಗಿ ನನಗೆ ವಿಶೇಷವಾಗಿ ಅನ್ನ ನೀಡುವವನಿದ್ದಿ. ಆದರೆ ನನಗೆ ಎಂತಹ ಅನ್ನವನ್ನು ನೀನು ಕೊಡಬೇಕೆಂದರೆ, ಯಾವ ಉಂಡ ಅನ್ನದ ಪಚನ ವೇದಪಾರಾಯಣದಿಂದ ಆಗುತ್ತದೆ, ಶಾಸ್ತ್ರಗಳ

ಅಧ್ಯಯನ ಮಾಡುವುದರಿಂದ ಆಗುತ್ತದೆ ಅಂತಹ ಅನ್ನವನ್ನು ನನಗೆ ಕೊಡು ಎಂಬುದಾಗಿ ದೇವರಿಗೆ ಪ್ರಾರ್ಥಿಸಿಕೊಳ್ಳಬೇಕು.

**ಉಂಡ ಅನ್ನ ಶಾಸ್ತ್ರಾಧ್ಯಯನದಿಂದ ಜೀರ್ಣವಾಗಬೇಕು**

ನಾವು ಭೋಜನ ಮಾಡಿದ ನಂತರ ಉಂಡ ಅನ್ನವು ಹೇಗೆ ಜೀರ್ಣವಾಗಬೇಕು ? ಎಂಬ ವಿಚಾರ ಬಂದಾಗ, ಶಾಸ್ತ್ರಗಳು ಸ್ಪಷ್ಟವಾಗಿ ಉತ್ತರ ನೀಡುತ್ತವೆ.

ಇತಿಹಾಸ-ಪುರಾಣಗಳಿಂದ ವೇದಗಳ ಅರ್ಥವನ್ನು ನಿರ್ಣಯಿಸುವ ಮೂಲಕ, ಭಾಗವತಾದಿಗಳನ್ನು ಶ್ರವಣಮಾಡುವ ಮೂಲಕ, ವೇದಪ್ರತಿಪಾದ್ಯನಾದ ಭಗವಂತನನ್ನು ತಿಳಿಯುವ ಮೂಲಕ ಉಂಡ ಅನ್ನವನ್ನು ಜೀರ್ಣ ಮಾಡಿಕೊಳ್ಳಬೇಕು ಎಂದು ತಿಳಿಸುತ್ತವೆ.

**ಆಚಾರ್ಯರ ಆದೇಶ**

ಸದಾಚಾರಸ್ಮೃತಿಯಲ್ಲಿ ನಮ್ಮ ದಿನಚರಿ ಹೇಗಿರಬೇಕು ? ಎಂದು ತಿಳಿಸುತ್ತಾ, ಭೋಜನವನ್ನು ಹೇಗೆ ಮಾಡಬೇಕು ? ಎಂಬುದನ್ನು ನಿರೂಪಿಸಿ, ಮುಂದೆ ಭೋಜನಾನಂತರ ಏನು ಮಾಡಬೇಕು ? ಎಂಬುದನ್ನು ಆಚಾರ್ಯರು ಹೇಳುತ್ತಾರೆ -

**ವೇದಶಾಸ್ತ್ರವಿನೋದೇನ**
**ಪ್ರೀಣಯನ್ ಪುರುಷೋತ್ತಮಮ್ ।**
**ಅಹಃಶೇಷಂ ನಯೇತ್ .....**

ವೇದ-ಶಾಸ್ತ್ರಗಳ ಅಧ್ಯಯನ-ಅಧ್ಯಾಪನ, ವಿಚಾರ-ವಿನಿಮಯಗಳಿಂದ ಉಳಿದ ಹಗಲನ್ನು (ಭೋಜನಾನಂತರದ ಕಾಲವನ್ನು) ಕಳೆಯಬೇಕು ಎಂಬುದಾಗಿ ಆದೇಶ ನೀಡುತ್ತಾರೆ.

ನೋಡಿ ! ಭೋಜನ ಮಾಡಿದ ನಂತರ ಮಲಗಬೇಕು, ಅಥವಾ ಹರಟೆ ಹೊಡೆಯಬೇಕು, ದೂರದರ್ಶನ ನೋಡಬೇಕು ಎಂದು ಆಚಾರ್ಯರು ಹೇಳಲಿಲ್ಲ. ಪರಂತು ಶಾಸ್ತ್ರಗಳ ಅಧ್ಯಯನ-ಅಧ್ಯಾಪನಗಳನ್ನು ಮಾಡುತ್ತಾ ಕಾಲ ಕಳೆಯಬೇಕು ಎಂದು ಆದೇಶಿಸಿದರು.

ಈ ಮೂಲಕ ನಮಗೆ ತಿಳಿಸಿದ ತತ್ವವೇನು ? ನಾವು ಉಂಡ ಅನ್ನವು ಜೀರ್ಣವಾಗಬೇಕಾದರೆ ದೇಹದಲ್ಲಿ ಏನಾದರೂ (ಆಕ್ಟಿವಿಟಿ) ಚಟುವಟಿಕೆ (ದೈಹಿಕವ್ಯಾಯಾಮ) ಆಗಲೇಬೇಕು. ಹಾಗಾದರೆ ದೇಹದಿಂದ ಎಂತಹ ಕೆಲಸಗಳನ್ನು ಮಾಡುತ್ತಾ ನಮ್ಮ ಅನ್ನ ಜೀರ್ಣವಾಗಬೇಕು ?

ಶಾಸ್ತ್ರದ ಅಧ್ಯಯನ-ಅಧ್ಯಾಪನಾದಿಗಳನ್ನು ಮಾಡುವ ಮೂಲಕ ಜೀರ್ಣವಾಗಬೇಕು. ಪುರಾಣಗಳ ಶ್ರವಣದಿಂದ ಜೀರ್ಣವಾಗಬೇಕು. ಸತ್ಕರ್ಮಾನುಷ್ಠಾನದಿಂದ ಜೀರ್ಣವಾಗಬೇಕು. ಹೊರತು ಮಲಗಿ ನಿದ್ರಿಸುವುದರಿಂದ ಅಥವಾ ಹರಟೆ ಹೊಡೆಯುವುದರಿಂದ, ಮತ್ತೊಬ್ಬರನ್ನು ನಿಂದಿಸುತ್ತಾ ಅಡ್ಡಾಡುವುದರಿಂದ, ದೂರದರ್ಶನ-

ಚಲನಚಿತ್ರಗಳನ್ನು ನೋಡುವುದರಿಂದ ಜೀರ್ಣವಾಗುವುದಲ್ಲ ಎಂಬ ತತ್ವವನ್ನು ತಿಳಿಸುತ್ತಿದ್ದಾರೆ ಆಚಾರ್ಯರು.

ಹಾಗಾದರೆ ಆಚಾರ್ಯರ ಆದೇಶದಂತೆ ಹಾಗೂ

**ವೇದಶಾಸ್ತ್ರವಿನೋದೇನ**
**ಕಾಲೋ ಗಚ್ಛತಿ ಧೀಮತಾಮ್ ।**

ಎಂಬ ಪ್ರಸಿದ್ಧ ಮಾತಿನಂತೆ ಉಂಡ ಅನ್ನವು ಶ್ರುತಿ-ಸ್ಮೃತಿಗಳ, ಬ್ರಹ್ಮಮೀಮಾಂಸಾಶಾಸ್ತ್ರದ, ಭಾಗವತಾದಿಗಳ ಅಧ್ಯಯನ-ಅಧ್ಯಾಪನ-ಶ್ರವಣಾದಿಗಳಿಂದ, ಸಜ್ಜನರ ಶುಶ್ರೂಷೆಯಿಂದ, ಪರೋಪಕಾರಗಳಿಂದ, ದೇವಸ್ಥಾನಗಳಿಗೆ ಹೋಗಿಬರುವುದರಿಂದ ಹೀಗೆ ಒಳ್ಳೆಯ ಕೆಲಸಗಳಿಂದ ಜೀರ್ಣವಾದರೆ ಅದು ಸಾರ್ಥಕ. ಅದುವೇ ಸದ್ಬುದ್ಧಿಜನಕ.

**ದುಷ್ಟಕರ್ಮಗಳನ್ನು ಮಾಡುತ್ತಾ ಜೀರ್ಣವಾದರೆ ದುಷ್ಟವಿಚಾರಗಳೇ ಮೂಡುವವು !**

ಛಾಂದೋಗ್ಯೋಪನಿಷತ್ತು ತಿಳಿಸುವಂತೆ ನಾವು ಉಣ್ಣುವ ಅನ್ನದ ಸೂಕ್ಷ್ಮಭಾಗವು ನಮ್ಮ ಮನಸ್ಸಿಗೆ ಪುಷ್ಟಿ ನೀಡುತ್ತದೆ. ಹಾಗಾಗಿ ನಿಷಿದ್ಧವಾದ ದೇಶದಲ್ಲಿ, ನಿಷಿದ್ಧವಾದ ಕಾಲದಲ್ಲಿ, ನಿಷಿದ್ಧವಾದ ರೀತಿಯಿಂದ ಅನ್ನ ಉಂಡರೆ ಹಾಗೂ ಉಂಡ ಅನ್ನವನ್ನು ದುಷ್ಟವಾದ ಗೀತೆಗಳನ್ನು ಕೇಳುತ್ತಾ, ಚಲನಚಿತ್ರಗಳನ್ನು ನೋಡುತ್ತಾ, ಅವರಿವರನ್ನು ದೂಷಿಸುತ್ತಾ,

ಹರಟೆ ಹೊಡೆಯುತ್ತಾ ಜೀರ್ಣ ಮಾಡಿಕೊಂಡರೆ ಅದರಿಂದ ನಿಷಿದ್ಧವಾದ ಕಾರ್ಯಗಳನ್ನೇ ಮಾಡಬೇಕೆಂಬ ಇಚ್ಛೆ-ಪ್ರವೃತ್ತಿ ಉಂಟಾಗುತ್ತದೆ. ಭಗವಂತನಿಂದ ವಿಮುಖನಾಗಿ, ಸಾಧನೆಯ ಮಾರ್ಗವನ್ನೇ ಮರೆಯುತ್ತಾನೆ. ನಿಷಿದ್ಧಕರ್ಮಗಳನ್ನೇ ಆಚರಿಸುತ್ತಾ ನಾನಾವಿಧ ಅನರ್ಥಗಳಿಗೆ ಗುರಿಯಾಗುತ್ತಾನೆ.

ಅದೇ ಪ್ರತಿನಿತ್ಯ ದೇವರಪೂಜೆಯನ್ನು ಮಾಡಿ, ನೈವೇದ್ಯ-ವೈಶ್ವದೇವ-ಬಲಿಹರಣಗಳನ್ನು ಆಚರಿಸಿ ಅತಿಥಿಗಳಿಗೆ ಭೋಜನ ಮಾಡಿಸಿ, ಅಂತಹ ಪವಿತ್ರವಾದ ಅನ್ನವನ್ನು ತಾನು ಉಂಡರೆ, ಜೊತೆಗೆ ಶಾಸ್ತ್ರಗಳ ಅಧ್ಯಯನ-ಅಧ್ಯಾಪನಗಳಿಂದ, ಪುರಾಣಗಳ ಶ್ರವಣದಿಂದ, ಪರೋಪಕಾರದಿಂದ, ಸಜ್ಜನರ ಶುಶ್ರೂಷೆಯಿಂದ ಉಂಡ ಅನ್ನವನ್ನು ಜೀರ್ಣಮಾಡಿಕೊಂಡರೆ ಮನಸ್ಸು ಯಾವಾಗಲೂ ಸದ್ವಿಚಾರಗಳಲ್ಲಿಯೇ ತಲ್ಲೀನವಾಗಿರುತ್ತದೆ. ಭಗವತ್ತತ್ವದಲ್ಲಿಯೇ ಆಸಕ್ತವಾಗಿರುತ್ತದೆ. ಅದರ ಫಲವಾಗಿ ಸದಾಚಾರ-ಸದ್ವಿಚಾರಗಳಿಂದ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುತ್ತಾನೆ. ಸಾಧನೆಯ ಮಾರ್ಗದಲ್ಲಿ ಸಾಕಷ್ಟು ಮುನ್ನಡೆಯುತ್ತಾನೆ.

ಹಾಗಾದರೆ, ಪ್ರತಿನಿತ್ಯ ನಾವು ದೇವರಿಗೆ ಪುಷ್ಪಗಳನ್ನು ಸಮರ್ಪಿಸುವಾಗ ಏನು ಪ್ರಾರ್ಥಿಸಿಕೊಳ್ಳಬೇಕು ?

## ಶಾಸ್ತ್ರಾಧ್ಯಯನದಿಂದ ಜೀರ್ಣವಾಗುವ ಅನ್ನ ಕೊಡು

ಪುಷ್ಪಸಮರ್ಪಣೆಯ ಫಲವಾಗಿ ನನಗೆ ಸಮೃದ್ಧವಾಗಿ ಅನ್ನ ಕೊಡುವವನಿದ್ದಿ. ಆದರೆ ಎಂತಹ ಅನ್ನವನ್ನು ನನಗೆ ಕೊಡಬೇಕು?

ಪವಿತ್ರವಾದ ಅನ್ನವನ್ನೇ ಕೊಡು. ಅಂದರೆ :- ಪ್ರತಿನಿತ್ಯ ದೇವರಪೂಜೆಯನ್ನು ಮಾಡಿ, ನೈವೇದ್ಯ-ವೈಶ್ವದೇವ-ಬಲಿಹರಣಗಳನ್ನು ಆಚರಿಸಿ, ಅತಿಥಿಗಳಿಗೆ ಭೋಜನ ಮಾಡಿಸಿ, ಕೊನೆಯಲ್ಲಿ ಅಂತಹ ಪವಿತ್ರವಾದ ಅನ್ನವನ್ನು ನಾವು ಉಣ್ಣುವಂತೆ ಅನುಗ್ರಹ ಮಾಡು.

ಜೊತೆಗೆ ಶಾಸ್ತ್ರಗಳ ಅಧ್ಯಯನ-ಅಧ್ಯಾಪನಗಳಿಂದ, ಪುರಾಣಗಳ ಶ್ರವಣದಿಂದ, ಪರೋಪಕಾರದಿಂದ, ಸಜ್ಜನರ ಶುಶ್ರೂಷೆಯಿಂದ ಹೀಗೆ ಒಳ್ಳೆಯ ಕೆಲಸಗಳಿಂದ ಉಂಡ ಅನ್ನವನ್ನು ಜೀರ್ಣ ಮಾಡಿಸು. ಆ ಮೂಲಕ ಮನಸ್ಸು ಯಾವಾಗಲೂ ಸದ್ವಿಚಾರಗಳಲ್ಲಿಯೇ ತಲ್ಲೀನವಾಗಿರುವಂತೆ, ಭಗವತ್ತತ್ವದಲ್ಲಿಯೇ ಆಸಕ್ತವಾಗಿರುವಂತೆ, ಅದರ ಫಲವಾಗಿ ಸದಾಚಾರ-ಸದ್ವಿಚಾರಗಳಿಂದ ಜೀವನವನ್ನು ಸಾರ್ಥಕಗೊಳಿಸುವಂತೆ ಅನುಗ್ರಹ ಮಾಡು.

ಹೊರತು ಎಲ್ಲೆಲ್ಲಿಯೋ ದುಷ್ಟವಾದ ದೇಶ-ಕಾಲಗಳಲ್ಲಿ ದುಷ್ಟವಾದ ರೀತಿಯಲ್ಲಿ ಅಪವಿತ್ರವಾದ ಅನ್ನವನ್ನು ಉಣ್ಣುವಂತೆ

ಮಾಡಬೇಡ ಎಂಬ ಪ್ರಾರ್ಥನೆಯನ್ನು ಪುಷ್ಪಸಮರ್ಪಣೆಯ ಕಾಲದಲ್ಲಿ ನಾವು ಮಾಡಬೇಕಿದೆ.

**ಪ್ರಯತ್ನವೂ ಜೊತೆಗಿರಲಿ !**

ಕೇವಲ ಪ್ರಾರ್ಥನೆಯಷ್ಟೇ ಅಲ್ಲ. ಆ ನಿಟ್ಟಿನಲ್ಲಿ ನಾವು ಪ್ರಯತ್ನವನ್ನೂ ಮಾಡಬೇಕಾದದ್ದು ಅತ್ಯಗತ್ಯವಾಗಿದೆ. ಸಾಧ್ಯವಾದಷ್ಟು ಮನೆಯಲ್ಲಿ ಮಾಡಿದ, ದೇವರಿಗೆ ಸಮರ್ಪಣೆ ಮಾಡಿದಂತಹ ಪವಿತ್ರವಾದ ಅನ್ನವನ್ನೇ ಉಣ್ಣುವ ಪ್ರಯತ್ನ ಮಾಡಬೇಕು. ಹೊರಗೆ ತಿನ್ನುವ ಪದ್ಧತಿಯನ್ನೇ ಸಂಪೂರ್ಣವಾಗಿ ಬಿಟ್ಟುಬಿಡುವ ಪ್ರಯತ್ನವನ್ನೂ ಮಾಡಬೇಕು. ಇದು ಮೊಟ್ಟಮೊದಲು ಅತ್ಯಗತ್ಯವಾಗಿ ಮಾಡಬೇಕಾದ ಪ್ರಯತ್ನ.

ಈ ಪ್ರಯತ್ನ ಸಫಲವಾಗುವುದಕ್ಕಾಗಿ ದೇವರಲ್ಲಿ ಪ್ರಾರ್ಥನೆ ಮಾಡಬೇಕು.

★★★

# ಪುಷ್ಪಗಳು ನಮ್ಮ ಅಧೀನವಲ್ಲ

ಪುಷ್ಪಗಳನ್ನು ಅರ್ಪಿಸುವಾಗ ನಾವು ತಿಳಿದಿರಬೇಕಾದ ಮತ್ತೊಂದು ಮಹತ್ವದ ವಿಷಯವೆಂದರೆ, ದೇವರಪೂಜೆಗಾಗಿ ದೇವರಿಗೆ ಸಮರ್ಪಿಸುವುದಕ್ಕಾಗಿ ತಂದಿಟ್ಟುಕೊಂಡಂತಹ ಸುಗಂಧಮಯವಾದ ಪುಷ್ಪಗಳು ಮಾತ್ರ ನಮ್ಮ ಅಧೀನ ಎಂಬುದಾಗಿ ಸರ್ವಥಾ ತಿಳಿದುಕೊಳ್ಳಬಾರದು.

ದೇವರೇ ಸೃಷ್ಟಿಸಿಕೊಟ್ಟಂತಹ ಪುಷ್ಪಗಳು, ದೇವರದೇ ಆದ ಪುಷ್ಪಗಳು ದೇವರಿಗೇ ಸಮರ್ಪಿತವಾಗಲಿ ಎಂಬ ಅನುಸಂಧಾನ ಇರಬೇಕು.

ಪುಷ್ಪಗಳಲ್ಲಿ ಮುಖ್ಯವಾಗಿ ಇರುವ ಆಕರ್ಷಣೆ ಗಂಧ. ರೂಪವೂ ಇದೆ. ಆದರೂ ಪುಷ್ಪಗಳಲ್ಲಿ ಗಂಧ ಹೆಚ್ಚು ಆಕರ್ಷಕ.

''**ಪುಣ್ಯೋ ಗಂಧಃ ಪೃಥಿವ್ಯಾಂ ಚ**''

ಎಂಬ ಭಗವದ್ಗೀತೆಯ ಮಾತು ನೆನಪಿಗೆ ಬರಬೇಕು. 'ಗಂಧವತೀ ಪೃಥಿವೀ' ಎಂದು ಹೇಳಿದಂತೆ ಗಂಧ ಎಲ್ಲ ಪಾರ್ಥಿವಪದಾರ್ಥಗಳಲ್ಲಿಯೂ ಇದೆ. ಅದರಲ್ಲಿಯೂ ಸುಗಂಧ ಪುಷ್ಪಗಳಲ್ಲಿರುವ ವಿಶೇಷಗುಣ. ಈ ವಿಧವಾದ ಸುಗಂಧವನ್ನು ಪುಷ್ಪಗಳಲ್ಲಿ ಇಟ್ಟವನು ಭಗವಂತ. ಆಶ್ಚರ್ಯವೆಂದರೆ, ಒಂದೊಂದು ಹೂವಿನಲ್ಲಿ ಒಂದೊಂದು ವಿಧವಾದ ಸುಗಂಧ.

ಒಂದು ಹೂವಿನಲ್ಲಿರುವ ಸುಗಂಧ ಮತ್ತೊಂದು ಹೂವಿನಲ್ಲಿ ಇಲ್ಲ. ಆ ಹೂವಿನಲ್ಲಿ ಮತ್ತೊಂದು ವಿಧವಾದ ಸುಗಂಧವೇ. ಇದು ಭಗವಂತನ ಅತ್ಯದ್ಭುತವಾದ ಸೃಷ್ಟಿಚಾತುರ್ಯ.

**ದೇವರಿಗೆ ಫ್ರೆಷ್ ಮಾಡಿದೆವು !**

ಧೂಪ, ಕೇಸರ-ಕರ್ಪೂರ ಮೊದಲಾದವುಗಳಿಂದ ಸಿದ್ಧಪಡಿಸಿದ ಚೂರ್ಣ, ಪುಷ್ಪಗಳು ಹೀಗೆ ನಾನಾವಿಧವಾದ ಸುಗಂಧಮಯಪದಾರ್ಥಗಳನ್ನು ದೇವರಿಗೆ ಸಮರ್ಪಿಸಿ

''ಬಿದಿರಿನ ಪೆಟ್ಟಿಗೆ, ಹಿತ್ತಾಳೆ ಪೆಟ್ಟಿಗೆ, ಕೃಷ್ಣಾಜಿನ ಇವುಗಳಲ್ಲಿ ಇಟ್ಟಿರುವ ಕಾರಣ ಕಮಟು ವಾಸಿನೆಯ ವಾತಾವರಣದಲ್ಲಿ ಇದ್ದು ಇದ್ದು ಬೇಸತ್ತ ದೇವರಿಗೆ ಸುಗಂಧವಸ್ತುಗಳನ್ನು ಏರಿಸಿ ಸ್ವಲ್ಪ ಫ್ರೆಷ್ ಮಾಡಿದಿವಿ''

ಎಂಬುದಾಗಿ ಸರ್ವಥಾ ಭಾವಿಸಬಾರದು. ದುರ್ಗಂಧಮಯ ಶರೀರ ಉಳ್ಳ ನಮ್ಮನ್ನು ದೇವರು ಫ್ರೆಷ್ ಮಾಡುತ್ತಾನೆಯೇ ಹೊರತು ದೇವರನ್ನು ನಾವು ಫ್ರೆಷ್ ಮಾಡುವುದಲ್ಲ. ದೇವರು ಸ್ವಯಂ ಸುಖಸ್ವರೂಪ. ಪರಮಸುಂದರಮೂರ್ತಿಯಾದವನು.

**ಜ್ಞಾನಜ್ಞಾನಃ ಸುಖಸುಖಃ ಜ್ಞಾನಭಾಸ್ವತ್ಪರಾಕ್ರಮಃ ।**
**ಸದ್ದೇಹಃ ಸುಖಗಂಧಶ್ಚ**

ಭಗವಂತ ಯಾವಾಗಲೂ ಸುಖಮಯಗಂಧಸ್ವರೂಪನು. ಅವನಿಗೆ ದುರ್ಗಂಧದ ಪ್ರಸಕ್ತಿಯೇ ಇಲ್ಲ.

**ದೇವರಿಗೆ ಇಲ್ಲವಾದದ್ದನ್ನು ಕೊಡುವುದಲ್ಲ**

ಹಾಗಾದರೆ, ಭಗವಂತ ಜಗತ್ತಿನಲ್ಲಿ ನಾನಾವಿಧವಾದ ಸುಗಂಧಮಯ ಪದಾರ್ಥಗಳನ್ನು ಸೃಷ್ಟಿ ಮಾಡಿ ನಮಗೆ ಅನುಭವಿಸುವುದಕ್ಕೆ ಕೊಟ್ಟು ಅನುಗ್ರಹಿಸಿದ್ದಾನೆ ಎಂಬ ಕಾರಣಕ್ಕೆ ದೇವರಿಗೆ ಕೃತಜ್ಞತೆಯನ್ನು ಸಲ್ಲಿಸುವುದಕ್ಕೆ ನಾವು ಪುಷ್ಪಗಳನ್ನು ಏರಿಸುವುದೇ ಹೊರತು ದೇವರಿಗೆ ಇಲ್ಲವಾದದ್ದನ್ನು ಕೊಡುವುದು ಎಂದಲ್ಲ.

ನಮಗೆ ಇಲ್ಲದೇ ಇದ್ದದ್ದನ್ನು ಕೊಟ್ಟು ಅನುಗ್ರಹಿಸಿದ್ದಿ. ನೀನೇ ಕೊಟ್ಟದ್ದನ್ನು ನಿನ್ನ ಅಪ್ಪಣೆಯಿಂದ ಅನುಭವಿಸುತ್ತಾ ಇದ್ದೇನೆ. ನಿನ್ನ ದೃಷ್ಟಿಯಿಂದ ಇದನ್ನು ಪವಿತ್ರವನ್ನಾಗಿ ಮಾಡು. ಅಥವಾ ಇದನ್ನು ಆಘ್ರಾಣ ಮಾಡಿ ಅನುಗ್ರಹಿಸು ಎಂಬುದಾಗಿ ಪ್ರಾರ್ಥನೆ ಮಾಡಿಕೊಳ್ಳುವುದೇ ಹೊರತು ಅವನಿಗೆ ಇಲ್ಲದೇ ಇದ್ದದ್ದನ್ನು ಕೊಡುತ್ತಿದ್ದೇನೆ ಎಂದು ತಿಳಿಯಬಾರದು.

**ಮೇಘಪುಷ್ಪ = ನೀರು**

ನೀರಿಗೆ ಮೇಘಪುಷ್ಪ ಎಂದು ಕರೆಯುತ್ತಾರೆ. ಮೇಘ ಎಂದರೆ ಮೋಡ. ಮೋಡದಿಂದ ಉದುರುವ ಹೂವುಗಳು ಎಂದರೆ ನೀರಿನ ಹನಿಗಳು. ಹಾಗಾಗಿ ನೀರಿಗೆ ಮೇಘಪುಷ್ಪ ಎಂದು ಕರೆಯುತ್ತಾರೆ.

**ಪುಷ್ಪವಂತೌ = ಸೂರ್ಯ,ಚಂದ್ರರು**

**ಏಕವೃತ್ಯಾ ಪುಷ್ಪವಂತೌ ನಿಶಾಕರದಿವಾಕರೌ ।**

ಎಂಬುದಾಗಿ ಹೇಳಿದಂತೆ ಸೂರ್ಯ-ಚಂದ್ರ ಇಬ್ಬರಿಗೂ ''ಪುಷ್ಪವಂತೌ'' ಎಂದು ಕರೆಯುತ್ತಾರೆ.

**ಪುಷ್ಪಬಾಣ = ಕಾಮ**

ಪುಷ್ಪಬಾಣ ಎಂದರೆ ಕಾಮ. ಕಾಮೋದ್ರೇಕಗೊಳಿಸುವುದಕ್ಕಾಗಿ ಪುಷ್ಪಗಳನ್ನೇ ಬಾಣವನ್ನಾಗಿ ಬಳಸುವವನು ಕಾಮ-ಮನ್ಮಥ. ಅದಕ್ಕಾಗಿ ಅವನಿಗೆ ಪುಷ್ಪಬಾಣ ಎಂದು ಹೆಸರು.

ಇವುಗಳಲ್ಲಿ ಎಲ್ಲವೂ ಭಗವಂತನ ಅಧೀನ. ನೀರೇ ಇಲ್ಲದಿದ್ದರೆ ಗಿಡ ಬೆಳೆಯಲು ಸಾಧ್ಯವಿಲ್ಲ. ನೀರಿನ ಪೋಷಣೆ ಇಲ್ಲದೇ ಪುಷ್ಪಗಳು ಅರಳಲು ಸಾಧ್ಯವಿಲ್ಲ. ಗಿಡ ಬೆಳೆಯಲು ಕೇವರ ನೀರಿದ್ದರೆ ಸಾಲದು. ಸೂರ್ಯನ ಬೆಳಕು ಇಲ್ಲದಿದ್ದರೆ ಗಿಡಗಳು ಬೆಳೆಯುವುದಿಲ್ಲ. ಹಾಗಾಗಿ ಸೌರಶಕ್ತಿಯೂ ಆವಶ್ಯಕ. ವನಸ್ಪತಿಗಳಿಗೆ ತನ್ನ ಕಿರಣಗಳ ಮೂಲಕ ಬೆಳವಣಿಗೆಯನ್ನು ಕೊಡುವ ವನಸ್ಪತಿರಾಜ ಚಂದ್ರನ ಆವಶ್ಯಕತೆಯೂ ಇದೆ. ಸೂರ್ಯ-ಚಂದ್ರರ ಕಿರಣಗಳ ಸ್ಪರ್ಶ ಇಲ್ಲದೇ ಹೂವು ಅರಳಲು ಸಾಧ್ಯವಿಲ್ಲ. ಹಾಗಾಗಿ ಸೂರ್ಯ-ಚಂದ್ರರ ಕಿರಣಗಳಿಂದ, ನೀರಿನ ಸಹಾಯದಿಂದ ಗಿಡ ಬೆಳೆದರೆ ಹೂವು ನಮಗೆ ಸಿಗುತ್ತದೆ.

**ಮೇಘಪುಷ್ಪ-ಪುಷ್ಪವಂತ-ಪುಷ್ಪಬಾಣಗಳೂ ಭಗವದಧೀನ**

ಇವುಗಳಲ್ಲಿ ಎಲ್ಲವೂ ಭಗವಂತನ ಅಧೀನ ಎಂದಮೇಲೆ ಹೂವು ಭಗವಂತನ ಅಧೀನ ಎಂದು ಪ್ರತ್ಯೇಕ ಹೇಳಬೇಕೆ ?

**ತಾಪಿನೀ ಪಾಚಿನೀ ಚೈವ ಶೋಚಿನೀ ಚ ಪ್ರಕಾಶಿನೀ ।**
**ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥**

**ಯದಾದಿತ್ಯಗತಂ ತೇಜಃ**
**ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ**
**ತತ್ತೇಜೋ ವಿದ್ಧಿ ಮಾಮಕಮ್ ।**

ಎಲ್ಲ ತೇಜೋಮಯ ವಸ್ತುಗಳಲ್ಲಿ ಇದ್ದು ತೇಜಸ್ಸನ್ನು ಕೊಟ್ಟು ನಿಯಮಿಸುವವನು ಭಗವಂತನೇ. ಹಾಗಾಗಿ ಸೂರ್ಯ-ಚಂದ್ರರ ಕಿರಣಗಳು ಭಗವಂತನ ಅಧೀನ.

''**ರಸೋಽಹಮಪ್ಸು ಕೌಂತೇಯ**''

ಎಂಬುದಾಗಿ ಭಗವಂತನೇ ಹೇಳಿದಂತೆ ನೀರು ಅದೂ ಸಹ ಭಗವಂತನ ಅಧೀನವಾದದ್ದು.

ನೀರಿನಲ್ಲಿದ್ದು ಗಿಡಗಳಿಗೆ ಶಕ್ತಿ ತುಂಬಿ, ಗಿಡಗಳನ್ನು ಸಂರಕ್ಷಿಸುವವನೂ ಭಗವಂತನೇ. ಸೂರ್ಯ-ಚಂದ್ರರಲ್ಲಿದ್ದು ಸೌರ-ಚಾಂದ್ರಶಕ್ತಿಗಳ ಮೂಲಕ ಗಿಡಗಳನ್ನು ಬೆಳೆಸುವವನೂ ಭಗವಂತನೇ. ಮೇಘಗಳಲ್ಲಿದ್ದು ಭೂಮಿಗೆ ನೀರನ್ನು ಸುರಿಸುವ

ಮೂಲಕ ಗಿಡಗಳನ್ನು ಪಾಲಿಸುವವನೂ ಭಗವಂತನೇ. ಈ ವಿಷಯದಲ್ಲಿ ಇತಿಹಾಸ-ಪುರಾಣಗಳೆಲ್ಲ ಪ್ರಮಾಣವಾಗಿವೆ. ಹೀಗಿರುವಾಗ ಹೂವುಗಳು ಸಂಪೂರ್ಣ ಭಗವದಧೀನ, ಅದರಲ್ಲಿ ನನ್ನದೇನಿದೆ ? ಅದರಲ್ಲಿರುವ ರೂಪ-ರಸ-ಗಂಧ ಎಲ್ಲವೂ ಭಗವಂತನ ಅಧೀನ.

**★ಪುಷ್ಪವಂತೌ ಯಸ್ಯ ವಶೇ ಮೇಘಪುಷ್ಪಂ ಚ ಯದ್ವಶಮ್ ।**
**ಪುಷ್ಪಬಾಣೋ ಯಸ್ಯ ವಶೇ ಕಿಂ ಪುಷ್ಪಾಣಿ ನ ತದ್ವಶೇ ॥**

ಪುಷ್ಪವಂತರು = ಸೂರ್ಯಚಂದ್ರರು ಇವನ ಅಧೀನ, ಮೇಘಪುಷ್ಪ = ನೀರೂ ಇವನ ಅಧೀನ, ಪುಷ್ಪಗಳನ್ನೇ ಬಾಣವಾಗಿ ಬಳಸುವ ಪುಷ್ಪಬಾಣ = ಕಾಮನೂ ಇವನ (ಮಗ) ಅಧೀನ ಎಂದಮೇಲೆ ಪುಷ್ಪಗಳು ಇವನ ಅಧೀನವಾಗದೇ ಇರಲು ಸಾಧ್ಯವೇ ?

**ದೋಷದೂರನಾದ ದೇವ ! ಪುಷ್ಪಗಳನ್ನು ಸ್ವೀಕರಿಸಿ ಅನುಗ್ರಹಿಸು**

ಅದಕ್ಕಾಗಿ ಭಗವಂತನಿಗೆ ನಾವು ಪ್ರಾರ್ಥನೆ ಮಾಡಬೇಕು-

**★ಪೋಷಣಾತ್ ಪುಷ್ಪನಾಮಾ ತ್ವಂ ಪುಷ್ಪಮಾಜಿಘ್ರ, ಪುಷ್ಪಗ ।**
**ಪುಷ್ಪಹಾಸ ನಮಸ್ತೇಽಸ್ತು ಖಪುಷ್ಪಾಯಿತದೂಷಣ ॥**

ಜಗತ್ತಿಗೆ ಪೋಷಣೆ ಕೊಡುವುದಕ್ಕಾಗಿ 'ಪುಷ್ಪ' ಎಂಬ ಹೆಸರಿನಿಂದ ನೀನು ಪುಷ್ಪದೊಳಗಿದ್ದಿ. ನಾನು ಅರ್ಪಣೆ

★ ಶ್ರೀಸತ್ಯಾತ್ಮತೀರ್ಥಶ್ರೀಪಾದರಿಂದ ವಿರಚಿತ

ಮಾಡುವುದು ಈ ಭೂಮಿಯ ಮೇಲೆ ಬೆಳೆದ ಸಾಮಾನ್ಯಪುಷ್ಪ. ದೇವತೆಗಳು ನಂದನವನದ ಭಾರೀ ಭಾರೀ ಪುಷ್ಪಗಳನ್ನೆಲ್ಲ ನಿನಗೆ ಸಮರ್ಪಣೆ ಮಾಡುವವರಿದ್ದಾರೆ. ಬ್ರಹ್ಮದೇವರು ಸತ್ಯಲೋಕದ ಅತ್ಯದ್ಭುತವಾದ ಹೂವುಗಳನ್ನು ನಿನಗೆ ಸಮರ್ಪಣೆ ಮಾಡುವವರಿದ್ದಾರೆ. ಹೀಗಿರುವಾಗ ನಾನಾವುದೋ ಸಾಮಾನ್ಯ ಪುಷ್ಪಗಳನ್ನು ಅರ್ಪಿಸಿದ್ದೇನೆ ಎಂಬುದಾಗಿ ಮೂಗು ಮುರಿಯಬೇಡ. ನಾನು ಅರ್ಪಿಸಿದ ಈ ಹೂವುಗಳಲ್ಲಿರುವ ಸುಗಂಧವನ್ನೂ ಆಘ್ರಾಣ ಮಾಡಿ ನನ್ನ ಮೇಲೆ ಅನುಗ್ರಹ ಮಾಡು.

''**ಪುಷ್ಪಹಾಸಃ ಪ್ರಜಾಗರಃ**''

ಎಂಬುದಾಗಿ ವಿಷ್ಣುಸಹಸ್ರನಾಮ ತಿಳಿಸುವಂತೆ ನಿನಗೆ ಪುಷ್ಪಹಾಸ ಎಂದು ಹೆಸರು. ಅದರ ವಿವರಣೆಯನ್ನು ಮುಂದೆ ತಿಳಿಯೋಣ.

**ಪರಮಾತ್ಮನಲ್ಲಿ ಪ್ರಾರ್ಥನೆ**

ಪುಷ್ಪಹಾಸ ಎಂದು ಕರೆಸಿಕೊಳ್ಳುವ ಹೇ ಭಗವನ್ ! ನೀನು ಖಪುಷ್ಪಾಯಿತದೂಷಣ. ನಿನ್ನಲ್ಲಿ ದೋಷಗಳು ಎಂದರೆ ಖಪುಷ್ಪವಾಗಿವೆ. ಅದರರ್ಥ :- ಖಪುಷ್ಪ ಎಂದರೆ ಗಗನಕುಸುಮ. ಆಕಾಶದಲ್ಲಿ ಬೆಳೆಯುವ ಹೂವು. ಆಕಾಶದಲ್ಲಿ ಎಂದಾದರೂ ಹೂವು ಬೆಳೆಯಲು ಸಾಧ್ಯವೇ ? ಸಾಧ್ಯವೇ ಇಲ್ಲ. ಗಗನಕುಸುಮ ಅದು ಅತ್ಯಂತ ಅಸತ್ ಆದದ್ದು.

ಅದಕ್ಕಾಗಿಯೇ ಶಾಸ್ತ್ರದಲ್ಲಿ ಯಾವುದನ್ನಾದರೂ ಅಸತ್ ಎಂದು ಹೇಳಬೇಕಾದರೆ ಗಗನಕುಸುಮದಂತೆ ಎಂಬುದಾಗಿ ದೃಷ್ಟಾಂತ ಕೊಡುತ್ತಾರೆ. ಹಾಗೆ ನಿನ್ನಲ್ಲಿ ದೋಷಗಳು ಗಗನಕುಸುಮದಂತೆ ಇವೆ. ಅರ್ಥಾತ್ ನಿನ್ನಲ್ಲಿ ದೋಷಗಳು ಅತ್ಯಂತ ಅಸತ್ ಆಗಿವೆ. ಅಜ್ಞಾನ, ವಿಪರೀತಜ್ಞಾನ, ಸಂಶಯ, ಶ್ರಮ, ಚಿಂತೆ, ಜನ್ಮ, ಮರಣ, ಬೆವರು ಈ ತರಹದ ದೋಷಗಳು ಭಗವಂತನ ವಿಷಯದಲ್ಲಿ ಹೇಗಿವೆ ಎಂದರೆ ಗಗನಕುಸುಮದಂತೆ. ಗಗನಕುಸುಮ ಎಂದಿಗೂ ಇರಲು ಸಾಧ್ಯವಿಲ್ಲ. ಹಾಗೆ ಭಗವಂತನಲ್ಲಿ ದೋಷ ಎಂದಿಗೂ ಇರಲು ಶಕ್ಯವಿಲ್ಲ. ಅಂತಹ ದೋಷದ ಲೇಶವೂ ಇಲ್ಲದ ನಿರ್ದುಷ್ಟ ವ್ಯಕ್ತಿ ನೀನು.

ಇಂತಹ ಸಕಲದೋಷದೂರನಾದ ನಿನಗೆ, ನೀನೇ ಕೊಟ್ಟಂತಹ ಪುಷ್ಪಗಳನ್ನು ಸಮರ್ಪಣೆ ಮಾಡುತ್ತಿದ್ದೇನೆ. ದಯಮಾಡಿ ಸ್ವೀಕಾರ ಮಾಡು. ಅಜ್ಞಾನ-ವಿಪರೀತಜ್ಞಾನ-ಸಂಶಯಗಳನ್ನು ಪರಿಹರಿಸಿ, ಉತ್ತಮವಾದ ತತ್ತ್ವಜ್ಞಾನವನ್ನು ಕೊಟ್ಟು ಅನುಗ್ರಹ ಮಾಡು ಎಂಬುದಾಗಿ ಭಕ್ತಿಯಿಂದ ವಿನಮ್ರತೆಯಿಂದ ವಿನಂತಿಸಿಕೊಳ್ಳಬೇಕು.

★★★

# ಪುಷ್ಪಹಾಸ - ೧

ಇಡೀ ಜಗತ್ತಿನ ಸೃಷ್ಟ್ಯಾದಿಕಾರ್ಯಗಳನ್ನು ನಿರಂತರವಾಗಿ ಮಾಡಿದರೂ ಭಗವಂತನಿಗೆ ಸ್ವಲ್ಪವೂ ಶ್ರಮವಿಲ್ಲ. ನಗುನಗುತ್ತಲೇ ಇರುವ ವ್ಯಕ್ತಿತ್ವ ಅವನದು. ಪರಮಾತ್ಮ ಪುಷ್ಪಗಳ ಮೂಲಕ ತನ್ನ ನಗುವನ್ನು ಸೂಚಿಸುತ್ತಾನೆ.

**''ಪುಷ್ಪಹಾಸಃ ಪ್ರಜಾಗರಃ''**

ಎಂಬುದಾಗಿ ವಿಷ್ಣುಸಹಸ್ರನಾಮ ತಿಳಿಸಿದಂತೆ ಭಗವಂತನಿಗೆ ಪುಷ್ಪಹಾಸ ಎಂದು ಹೆಸರು. ಭಗವಂತನಿಗೆ ಪುಷ್ಪಗಳನ್ನು ಏರಿಸುವಾಗ,

**ಪುಷ್ಪಹಾಸ ನಮಸ್ತೇಽಸ್ತು**
**ಖಪುಷ್ಪಾಯಿತದೂಷಣ ॥**

ಪುಷ್ಪಹಾಸನಾದ ನಿನಗೆ ನಾನು ಪುಷ್ಪಗಳನ್ನು ಏರಿಸುತ್ತಿದ್ದೇನೆ ಎಂಬ ಅನುಸಂಧಾನ ಮಾಡಬೇಕು ಎಂಬುದಾಗಿ ಈ ಹಿಂದೆ ತಿಳಿದಿದ್ದೇವೆ. ಭಗವಂತನಿಗೆ ಪುಷ್ಪಹಾಸ ಎಂದು ಏಕೆ ಕರೆಯುತ್ತಾರೆ ? ಅದರ ಹಿನ್ನಲೆಯನ್ನು ಸ್ವಲ್ಪ ಚಿಂತನೆ ಮಾಡೋಣ.

**ಭಗವಂತನಿಗೆ ಎಷ್ಟು ಆಯಾಸವಾಗಲಿಕ್ಕಿಲ್ಲ ?**

ಜಗತ್ತಿನ ನಾನಾವಿಧವಾದ ಕಾರ್ಯಗಳನ್ನು ಭಗವಂತ ನಿರಂತರವಾಗಿ ಮಾಡುತ್ತಲೇ ಇರುತ್ತಾನೆ. ಒಂದುಕಡೆ ಜಡಪದಾರ್ಥಗಳ ನಿಯಮನವಾದರೆ, ಮತ್ತೊಂದೆಡೆ ಚೇತನರ ನಿಯಮನ. ಸತ್ವರಜಸ್ತಮೋಗುಣಗಳಿಂದ ಆರಂಭ ಮಾಡಿ ಪಂಚಭೂತಗಳವರೆಗೆ ಬ್ರಹ್ಮಾಂಡದ ಹೊರಗೆ-ಒಳಗೆ ಅಸಂಖ್ಯಾತಜಡಪದಾರ್ಥಗಳ ಸೃಷ್ಟಿ-ಸ್ಥಿತಿ-ಲಯಾದಿಗಳನ್ನು ನಿರ್ವಹಿಸುತ್ತಲೇ ಇರಬೇಕು. ಸೃಷ್ಟಿಗೆ ಬರುವ ಚೇತನರು ಎಷ್ಟಿದ್ದಾರೆ ? ಅನಂತಸಂಖ್ಯಾಕಚೇತನರು ಸೃಷ್ಟಿಗೆ ಬರಬೇಕು. ಅವರೆಲ್ಲರಿಗೆ ದೇಹ-ಮನಸ್ಸು-ಇಂದ್ರಿಯಗಳನ್ನು ನೀಡಿ, ಯೋಗ್ಯತೆಗೆ ತಕ್ಕಂತೆ ಸಾಧನೆ ಮಾಡಿಸಬೇಕು. ಎಲ್ಲರಿಗೂ ಸೃಷ್ಟಿ-ಸ್ಥಿತಿ-ಲಯ-ನಿಯಮನಗಳನ್ನು ನಿರ್ವಹಿಸಬೇಕು. ಕೆಲವರಿಗೆ ಜ್ಞಾನ, ಇತರರಿಗೆ ಅಜ್ಞಾನ-ಸಂಶಯ-ವಿಪರ್ಯಯಗಳು, ಹಲವರಿಗೆ ಬಂಧ, ಸಾಧಕರಿಗೆ ಮೋಕ್ಷ, ದುಷ್ಟರಿಗೆ ತಮಸ್ಸು, ಮಧ್ಯದಲ್ಲಿ ಸ್ವರ್ಗ-ನರಕಗಳು. ಅಬ್ಬ ! ಇಷ್ಟೆಲ್ಲ ಕಾರ್ಯಗಳನ್ನು ಒಬ್ಬನೇ ಭಗವಂತ ನಿರ್ವಹಿಸಬೇಕು.

ನಮ್ಮಂತಹ ಅಲ್ಪಶಕ್ತಿಯುಳ್ಳ ವ್ಯಕ್ತಿಗಳ ಪರಿಸ್ಥಿತಿಯನ್ನು ನೋಡಿಕೊಂಡರೆ, ಭಗವಂತ ಇಷ್ಟೆಲ್ಲ ಬಹುಚಿತ್ರವಿಚಿತ್ರವಾದ ನಾನಾವಿಧವಾದ ಕಾರ್ಯಗಳನ್ನು ನಿರಂತರವಾಗಿ ಮಾಡುತ್ತಲೇ ಇರುತ್ತಾನೆ ಎಂದರೆ ಆ ಭಗವಂತನಿಗೆ ಎಷ್ಟು ಆಯಾಸ ವಾಗಲಿಕ್ಕಿಲ್ಲ ! ಎಂದು ಅನಿಸುವುದು ಸಹಜ.

**ನಮಗೆ ವಿಶ್ರಾಂತಿ ಅತ್ಯಗತ್ಯ**

ಕಾರಣ ನಮಗೆ ಸ್ವಲ್ಪ ಕೆಲಸ ಮಾಡಿದರೆ ಆಯಾಸವಾಗುತ್ತದೆ. ಮಧ್ಯದಲ್ಲಿ ವಿಶ್ರಾಂತಿ ಬೇಕು. ಮಧ್ಯ ಮಧ್ಯ ವಿಶ್ರಾಂತಿ ಪಡೆದು ಕೆಲಸ ಮುಂದುವರೆಸಬೇಕು. ಹಗಲು ಪೂರ್ತಿ ಮುಗಿದಮೇಲಂತೂ ರಾತ್ರಿ ಸಂಪೂರ್ಣ ವಿಶ್ರಾಂತಿ ಬೇಕೇಬೇಕು. ರಾತ್ರಿ ಪೂರ್ಣ ವಿಶ್ರಾಂತಿ ಪಡೆದು ಫ್ರೆಷ್ ಆದಮೇಲೆ ಮತ್ತೆ ಮುಂದಿನ ಕಾರ್ಯ ಆರಂಭಿಸುತ್ತೇವೆ. ಹಾಗಾಗಿ ವಿಶ್ರಾಂತಿ ಇಲ್ಲದೇ ಕಾರ್ಯಗಳನ್ನು ಮಾಡುವ ಸಾಧ್ಯತೆ ನಮ್ಮಲ್ಲಿಲ್ಲ. ಅಶಕ್ತಿ, ಆಲಸ್ಯ ಇವುಗಳೆಲ್ಲ ನಮಗೆ ಅಡ್ಡಿಯಾಗುತ್ತವೆ.

ಹಾಗಾದರೆ ಒಬ್ಬ ವ್ಯಕ್ತಿ ತಾನು, ತನ್ನ ದೇಹ-ಇಂದ್ರಿಯ-ಗಳು, ತನ್ನ ಪರಿವಾರದವರು, ಸುತ್ತಮುತ್ತಲಿನ ವ್ಯಕ್ತಿಗಳಿಗೆ ಸಂಬಂಧಪಟ್ಟ ಕಾರ್ಯಗಳನ್ನು ಮಾಡಿದರೇನೇ ಇಷ್ಟು ಆಯಾಸವಾಗುತ್ತದೆ, ಆಯಾಸಪರಿಹಾರಕ್ಕಾಗಿ ವಿಶ್ರಾಂತಿಯ ಆವಶ್ಯಕತೆ ಇದೆ ಎನ್ನುವುದಾದರೆ, ಭಗವಂತನ ಕಾರ್ಯಗಳೆಷ್ಟು? ಭಗವಂತನಿಗೆ ಎಷ್ಟು ಆಯಾಸವಾಗಬೇಕು ? ಎಷ್ಟು ವಿಶ್ರಾಂತಿಯ ಆವಶ್ಯಕತೆ ಉಂಟು ? ಎಂದು ಅನಿಸುತ್ತದೆ.

ಭಗವಂತ ಅವಿಶ್ರಾಂತವಾಗಿ ಕೆಲಸ ಮಾಡಬೇಕಾಗುತ್ತದೆ. ಯಾಕೆಂದರೆ ಜಗತ್ತಿನ ಎಲ್ಲ ಕಾರ್ಯಗಳನ್ನೂ ಭಗವಂತನೇ

ಮಾಡಿಸುವವನು ಎಂದಮೇಲೆ, ಅವನಿಗೆ ಏನೂ ಕಾರ್ಯಗಳಿಲ್ಲದೇ ಪೂರ್ಣ ವಿಶ್ರಾಂತಿಯಲ್ಲಿರುವ ಪ್ರಸಂಗ ಎಂದಿಗೂ ಬರುವುದಿಲ್ಲ.

**ಆಸ್ಪತ್ರೆಗಳಿಗೆ ಭಾನುವಾರ ರಜೆಯಾದರೆ ?**

ನೋಡಿ ! ಇವತ್ತಿನ ಸಾಫ್ಟ್‌ವೇರ್ ಕಂಪನಿಗಳಿರಬಹುದು, ಹಾರ್ಡ್‌ವೇರ್ ಕಂಪನಿಗಳಿರಬಹುದು. ಇನ್ನಿತರ ಕಛೇರಿಗಳಿರಬಹುದು. ಅವುಗಳಿಗೆಲ್ಲ ಭಾನುವಾರ ರಜೆ ಇರುತ್ತದೆ. ಆದರೆ ಆಸ್ಪತ್ರೆಗಳಿಗೆ ಅದರಲ್ಲಿಯೂ ತುರ್ತುನಿಗಾಘಟಕಗಳಿಗೆ ರಜೆ ಸಾಧ್ಯವಿಲ್ಲ. ಕಾರಣ ಅಂತಹ ಎಮರ್ಜೆನ್ಸಿ ವಾರ್ಡ್‌ಗಳಲ್ಲಿ ಅಪಘಾತದ ಕೇಸ್‌ಗಳು, ಹೃದಯಾಘಾತದಂತಹ ತುರ್ತು ಕೇಸ್‌ಗಳು ಬಂದಾಗ ತಕ್ಷಣಕ್ಕೆ ಚಿಕಿತ್ಸೆ ನೀಡಬೇಕಾಗುತ್ತದೆ. ಅಂತಹ ಆಸ್ಪತ್ರೆಗಳಲ್ಲಿ ''ಭಾನುವಾರ ರಜೆ'' ಎಂದು ಬೋರ್ಡ್ ಹಾಕಿಬಿಟ್ಟರೆ ತುರ್ತುಪರಿಸ್ಥಿತಿಯಲ್ಲಿ ಬಂದವರ ಗತಿಯೇನು ? ಹಾಗಾಗಿ ವೈದ್ಯರು ಶಿಫ್ಟ್ ಪ್ರಕಾರ ಬದಲಾಗಬೇಕೇ ಹೊರತು, ತಾವು ರಜೆಯಲ್ಲಿ ತೆರಳುವಾಗ ಆ ಜಾಗದಲ್ಲಿ ಬೇರೆ ವೈದ್ಯರನ್ನು ನಿಯೋಜಿಸಿ ಹೋಗಬೇಕೇ ಹೊರತು ಆಸ್ಪತ್ರೆಯನ್ನೇ ಬಂದ್ ಮಾಡಲು ಬರುವುದಿಲ್ಲ. ಕಾರಣ ? ಆ ಕೆಲಸವೇ ಅಂತಹದ್ದು. ಇಂದು ಆಗಲ್ಲ ನಾಳೆ ಬನ್ನಿ ಎಂದು ಹೇಳಿಕಳುಹಿಸಲು ಬರುವುದಿಲ್ಲ. ವೈದ್ಯವೃತ್ತಿಯಲ್ಲಿ ಇರುವವರು ನಿರಂತರವಾಗಿ ಕಾರ್ಯ ನಿರ್ವಹಿಸುತ್ತಲೇ ಇರಬೇಕು.

**ಪರಮಾತ್ಮ ಪೂರ್ಣ ವಿಶ್ರಾಂತಿ ಪಡೆದರೆ ?**

ಅದೇ ರೀತಿಯಾಗಿ ಜಗತ್ತಿನ ಎಲ್ಲ ವಿವಿಧಕಾರ್ಯಗಳಿಗೆ ಭಗವಂತ ವಿಶ್ರಾಂತಿ ನೀಡಿದರೆ ? ಪ್ರತಿಯೊಬ್ಬ ಜೀವರ ಅಂತರ್ಯಾಮಿಯಾಗಿ ಶ್ವಾಸೋಚ್ಛ್ವಾಸ ಮಾಡಿಸುತ್ತಾ, ಅಸ್ತಿತ್ವ ಕೊಟ್ಟು, ಪ್ರತಿಕ್ಷಣದಲ್ಲಿ ಅವರಿಂದ ಕರ್ಮಗಳನ್ನು ಮಾಡಿಸುತ್ತಾ ಜಗದ್ರಥವನ್ನು ಮುನ್ನಡೆಸುವ ಭಗವಂತ,

''ಈಗ ಚಾತುರ್ಮಾಸ್ಯಕಾಲ. ನನಗೆ ವಿಶ್ರಾಂತಿಸಮಯ. ಹಾಗಾಗಿ 4 ತಿಂಗಳು ನಾನು ಯಾವ ಕಾರ್ಯವನ್ನೂ ಮಾಡುವುದಿಲ್ಲ''

ಎಂಬುದಾಗಿ ಪೂರ್ಣವಾಗಿ ವಿಶ್ರಾಂತಿ ಪಡೆದರೆ ಜಗತ್ತಿನ ಗತಿಯೇನು ? ಜಗತ್ತಿನಲ್ಲಿ ಯಾವ ಕಾರ್ಯವೂ ನಡೆಯದೇ ಎಲ್ಲರೂ ಇದ್ದಲ್ಲಿಯೇ ಇದ್ದಕ್ಕಿದ್ದಂತೆ ಕುಸಿದು ಬಿದ್ದುಬಿಡುವ ಪ್ರಸಂಗ ಎದುರಾದೀತು ! ಯಾರಿಗೂ ಅಸ್ತಿತ್ವವೇ ಇಲ್ಲ ಎನ್ನುವ ಪರಿಸ್ಥಿತಿ ಬಂದೀತು ! 4 ತಿಂಗಳು ಏಕೆ ? ಕೇವಲ ಒಂದು ಕ್ಷಣ ದೇವರು ಎಲ್ಲ ವ್ಯಾಪಾರಗಳನ್ನು ಬಿಟ್ಟು ಸುಮ್ಮನೆ ಕುಳಿತರೆ ಸಾಕು ಜಗತ್ತೇ ಅಸ್ತಿತ್ವವನ್ನು ಕಳೆದುಕೊಳ್ಳಬೇಕಾದೀತು !

ಹಾಗಾಗಿ ಭಗವಂತನ ಜಗನ್ನಿಯಮನಕಾರ್ಯ ಎಡೆಬಿಡದೇ ನಿರಂತರವಾಗಿ ನಡೆಯುತ್ತಲೇ ಇರಬೇಕು. ಭಗವಂತನ ವ್ಯಾಪಾರ ಸ್ಥಗಿತಗೊಳ್ಳುವ ಪ್ರಸಂಗ ಬರುವುದಿಲ್ಲ. ಅಂತಹ ಪ್ರಸಂಗ ಒಮ್ಮೆ ಬರುವ ಪ್ರಸಕ್ತಿ ಉಂಟು ಅದು

ಪ್ರಲಯಕಾಲದಲ್ಲಿ. ಆದರೆ ಪ್ರಲಯದಲ್ಲಿ ಸೃಷ್ಟಿ-ಸ್ಥಿತಿ ಕಾರ್ಯಗಳು ಇರುವುದಿಲ್ಲವಾದರೂ ಸಂಹಾರ ಕಾರ್ಯ ನಡೆದಿರುತ್ತದೆ. ಇತರ ಕಾರ್ಯಗಳು ನಡೆದಿರುತ್ತವೆ. ಆದ್ದರಿಂದ ಭಗವಂತನಿಗೆ ವಿಶ್ರಾಂತಿ ಆಗಲೂ ಇಲ್ಲ.

**ಅವಿಶ್ರಾಂತನಿಗೆ ಏನು ಸುಖವಿದೆ ?**

ಹಾಗಾದರೆ ಯಾವ ಕಾಲದಲ್ಲಿಯೂ ಭಗವಂತನಿಗೆ ವಿಶ್ರಾಂತಿ ಇಲ್ಲ ಎಂದಾಯಿತು. ವಿಶ್ರಾಂತಿಯೇ ಇಲ್ಲದೇ ಭಗವಂತ ನಿರಂತರವಾಗಿ ಕೆಲಸಗಳನ್ನು ಮಾಡುತ್ತಲೇ ಇರುತ್ತಾನೆ ಎಂದರೆ, ಅವನಿಗೆ ಏನು ಸುಖವಿದೆ ? ಭಗವಂತನಿಗೆ ಸುಖವೇ ಇಲ್ಲ. ಯಾವಾಗಲೂ ಚಿಂತೆ, ಒಂದುರೀತಿಯ ಟೆನ್ಶನ್, ಕಾರ್ಯದೊತ್ತಡ, ಮನಸ್ಸಿನಲ್ಲಿ ಒಂದುರೀತಿಯ ಭಾರ ಇದ್ದೇ ಇರುತ್ತದೆ.

**ರಮಣಂ ನಾತಿಯತ್ನಸ್ಯ ವಿಕ್ಷೇಪಾದೇವ ಯುಜ್ಯತೇ ।**

ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೇಳುವಂತೆ, ಬಹಳ ಕೆಲಸ ಮಾಡುವವನಿಗೆ ಮನಸ್ಸು ವಿಕ್ಷೇಪ ಆಗುವ ಕಾರಣ ಅವನಿಗೆ ರಮಣ=ಸುಖ ಉಂಟಾಗಲು ಸಾಧ್ಯವಿಲ್ಲ. ಹಾಗಾಗಿ ಚೇತನಾಚೇತನಾತ್ಮಕವಾದ ಜಗತ್ತನ್ನು ನಿರಂತರವಾಗಿ ಅವಿಶ್ರಾಂತನಾಗಿ ನಿಯಮನ ಮಾಡುವ ಭಗವಂತನಿಗೆ ಏನು ಸುಖವಿದೆ ? ಎಂದು ನಮಗೆ ಅನಿಸುತ್ತದೆ. ಹೀಗೊಂದು ಪ್ರಶ್ನೆ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ.

ಅದಕ್ಕೆ ಆಚಾರ್ಯರು ಅನುವ್ಯಾಖ್ಯಾನದಲ್ಲಿ ಬಹಳ ಸುಂದರವಾಗಿ ಉತ್ತರ ನೀಡುತ್ತಾರೆ -

**ಶಕ್ತಿಗೆ ತಕ್ಕಂತೆ ಶ್ರಮ**

ನಿಜ. ಯಾವನಿಗೆ ಚಿಂತೆ ಇರುತ್ತದೆ, ಯಾವನಿಗೆ ಶ್ರಮ ಉಂಟಾಗುತ್ತದೆ ಅವನಿಗೆ ಸುಖ ಆಗುವುದಿಲ್ಲ ಎನ್ನುವುದು ಸರಿಯೇ. ಆದರೆ ಕೇವಲ ಬಹಳ ಕೆಲಸ ಮಾಡಿದ ಮಾತ್ರಕ್ಕೆ ಶ್ರಮ ಆಗುವುದಿಲ್ಲ. ಅವನಲ್ಲಿರುವ ಶಕ್ತಿಯಮೇಲೆ ಅವನಿಗೆ ಶ್ರಮ ಆಗುವುದು ಆಗದಿರುವುದು ಅದನ್ನು ನಾವು ನಿರ್ಣಯ ಮಾಡಬಹುದು. ಉದಾ :- ಆಗತಾನೇ ನಡೆಯಲು ಆರಂಭಿಸಿದ ಚಿಕ್ಕ ಮಗುವಿಗೆ ನಾಲ್ಕು ಹೆಜ್ಜೆ ನಡೆದ ಕೂಡಲೇ ಶ್ರಮವಾಗಿ ಎತ್ತಿಕೊಳ್ಳಲು ಕೈಮಾಡುತ್ತದೆ. ಸ್ವಲ್ಪ ದೊಡ್ಡವನಾದ ಮೇಲೆ ಸ್ವಲ್ಪ ದೂರ ನಡೆಯುವಂತಾದರೂ ಬಹಳ ದೂರ ನಡೆಯಲು ಆಗುವುದಿಲ್ಲ. ಬಹಳ ದೂರ ನಡೆದರೆ ಶ್ರಮವಾಗುತ್ತದೆ. ಆದರೆ ಅದೇ ಯೌವ್ವನದಲ್ಲಿ ಬಹಳಷ್ಟು ದೂರ ನಡೆಯಲು ಸಮರ್ಥನಾಗುತ್ತಾನೆ. ಹಾಗಾದರೆ ಕೆಲಸ ಒಂದೇ ಆದರೂ ಶಕ್ತಿ ಕಡಿಮೆಯಿದ್ದಷ್ಟು ಶ್ರಮ ಆಗುತ್ತಾ ಹೋಗುತ್ತದೆ.

ಒಂದು ಸಣ್ಣ ಕೂಸು ''ನಾನು ನಾಲ್ಕು ಹೆಜ್ಜೆ ನಡೆದಮಾತ್ರಕ್ಕೆ ನನಗೆ ಇಷ್ಟು ಶ್ರಮವಾಗುತ್ತದೆ ಎಂದಮೇಲೆ ಇವರು (ದೊಡ್ಡವರು) ಇಷ್ಟು ದೂರ ನಡೆಯುತ್ತಾರೆ ಎಂದರೆ ಇವರಿಗೆ ಇನ್ನೆಷ್ಟು ಶ್ರಮವಾಗಿರಲಿಕ್ಕಿಲ್ಲ !'' ಎಂಬುದಾಗಿ ವಿಚಾರ

ಮಾಡಿದರೆ ಅದು ಎಷ್ಟು ಮೂರ್ಖತನವಾಗುತ್ತದೆಯೋ ಅದೇ ತರಹ ನಮ್ಮ ಪರಿಸ್ಥಿತಿಯಾಗಿದೆ.

ನಾವು ನಮ್ಮ ಶಕ್ತಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ''ಇಷ್ಟು ಕೆಲಸಗಳನ್ನು ಮಾಡಿದರೇನೇ ನಮಗೆ ಇಷ್ಟು ಶ್ರಮವಾಗುತ್ತದೆ ಎಂದರೆ ಭಗವಂತನಿಗೆ ಇನ್ನೆಷ್ಟು ಶ್ರಮವಾಗಲಿಕ್ಕಿಲ್ಲ !'' ಎಂಬುದಾಗಿ ಆಲೋಚನೆ ಮಾಡಿದರೆ ಅದು ನಮ್ಮ ಮೌಢ್ಯದ ಪರಾಕಾಷ್ಠೆ ಎನಿಸುತ್ತದೆ. ಕಾರಣ ನಮಗಿಂತ ಅನಂತಪಟ್ಟು ಶಕ್ತಿಸಂಪನ್ನನಾದ ಭಗವಂತನಿಗೆ ಎಷ್ಟೇ ಕೆಲಸಗಳನ್ನು ಮಾಡಿದರೂ ಸ್ವಲ್ಪವೂ ಶ್ರಮವಾಗುವುದಿಲ್ಲ.

**ಎಲ್ಲವೂ ಭಗವಂತನ ಅಧೀನವಾಗಿರುವಾಗ ಭಗವಂತನಿಗೆ ಯಾವುದರ ಬಗ್ಗೆ ಚಿಂತೆ**

ಜೊತೆಗೆ ಚಿಂತೆ ಯಾರಿಗೆ ? ಯಾವ ವಸ್ತು ಯಾವನ ಅಧೀನವಾಗಿರುವುದಿಲ್ಲ ಆ ವಸ್ತುವಿನ ಬಗ್ಗೆ ಅವನಿಗೆ ಚಿಂತೆ. ಉದಾಃ- ನಾವು ರೈಲಿನಲ್ಲಿ ಪ್ರಯಾಣಿಸಲು ಹೊರಟಾಗ ಮನೆಯಿಂದ ಹೊರಡುವಾಗಲೇ ಚಿಂತೆ ಆರಂಭವಾಗಿರುತ್ತದೆ. ರೈಲುನಿಲ್ದಾಣಕ್ಕೆ ಹೋಗುವುದು ತಡವಾದರೆ ? ರೈಲು ಹೊರಟುಬಿಟ್ಟಿದ್ದರೆ ? ಇತ್ಯಾದಿ ಚಿಂತೆ. ಏಕೆ ? ರೈಲು ನಮ್ಮ ಅಧೀನವಲ್ಲ. ಅದೇ ಒಬ್ಬ ಮಂತ್ರಿ ರೈಲಿನಲ್ಲಿ ಪ್ರಯಾಣಿಸುವುದಿದ್ದರೆ ಮಂತ್ರಿಗಳಿಗೆ ಆ ವಿಧವಾದ ಚಿಂತೆ ಇರುವುದೇ ಇಲ್ಲ. ಯಾಕೆ ? ಮಂತ್ರಿಗಳು ಬರುವವರೆಗೆ ರೈಲು ಹೊರಡಬಾರದು

ಎಂಬುದಾಗಿ ಸಚಿವಾಲಯದಿಂದ ಆದೇಶ ಹೋಗಿರುತ್ತದೆ. ರೈಲು ಮಂತ್ರಿಗಳ ಅಧೀನವಾಗಿರುತ್ತದೆ. ಹೀಗಾಗಿ ಮಂತ್ರಿಗಳು ಎಷ್ಟೇ ತಡಮಾಡಿ ಹೋದರೂ ಮಂತ್ರಿಗಳಿಗೆ ರೈಲಿನ ಬಗ್ಗೆ ಚಿಂತೆ ಇರುವುದಿಲ್ಲ.

ಅದರಂತೆ, ರೈಲು ಮಂತ್ರಿಗಳ ಅಧೀನವಾದಾಗ ರೈಲಿನ ಬಗ್ಗೆ ಅವರಿಗೆ ಚಿಂತೆ ಇರುವುದಿಲ್ಲ ಹೇಗೋ ಹಾಗೆ ಇಡೀ ಜಗತ್ತೇ ಭಗವಂತನ ಅಧೀನವಾಗಿರುವಾಗ ಭಗವಂತನಿಗೆ ಯಾವುದರ ಬಗ್ಗೆ ಚಿಂತೆ ?

ಈ ವ್ಯಕ್ತಿ ನನ್ನ ಮಾತು ಕೇಳುತ್ತಾನೆಯೋ ಇಲ್ಲವೋ ? ಈ ವಸ್ತು ನನ್ನ ಇಚ್ಛೆಯ ಪ್ರಕಾರವಾಗಿ ಇರವುದೋ ಇಲ್ಲವೋ ? ಎಂಬ ಚಿಂತೆಗೆ ಅವಕಾಶವೇ ಇಲ್ಲ. ಕಾರಣ ಲಕ್ಷ್ಮೀದೇವಿಯನ್ನು ಆರಂಭ ಮಾಡಿ ತೃಣಜೀವದ ವರೆಗೆ ಎಲ್ಲ ಚೇತನರೂ ಭಗವಂತನ ಅಧೀನ. ಕಡ್ಡಿಯನ್ನು ಆರಂಭ ಮಾಡಿ ಪ್ರಕೃತಿತತ್ವದ ವರೆಗೆ ಎಲ್ಲ ಜಡಪದಾರ್ಥಗಳೂ ಭಗವಂತನ ಅಧೀನ. ಎಲ್ಲವೂ ಭಗವಂತನ ಅಧೀನವಾದಾಗ, ''ನಾನು ನಡೆಸುವಂತೆ ನಡೆಯುತ್ತಾರೋ ಇಲ್ಲವೋ ?'' ''ನಾನು ಅಂದುಕೊಂಡಂತೆ ಕೆಲಸಗಳು ಆಗುವುದೋ ಇಲ್ಲವೋ ?'' ಎಂಬ ಆತಂಕ, ಚಿಂತೆ ಭಗವಂತನಿಗೆ ಪ್ರಸಕ್ತವೇ ಆಗುವುದಿಲ್ಲ.

ಆದ್ದರಿಂದ ಭಗವಂತನನ್ನು ನಮ್ಮ ಜೊತೆ ಸಮೀಕರಣ ಮಾಡಿಕೊಂಡು ನೋಡಿಕೊಳ್ಳಬೇಡಿ. ಭಗವಂತ ಸರ್ವಸ್ವಾಮಿ

ಯಾದದ್ದರಿಂದ, ಸರ್ವತಂತ್ರಸ್ವತಂತ್ರನಾದದ್ದರಿಂದ, ಅನಂತವಾದ ಶಕ್ತಿ ಭಗವಂತನಲ್ಲಿ ಇದ್ದದ್ದರಿಂದ ಯಾವುದೇ ಚಿಂತೆ ಇಲ್ಲದೇ, ಸ್ವಲ್ಪವೂ ಶ್ರಮ ಇಲ್ಲದೇ ಎಲ್ಲ ಕಾರ್ಯಗಳನ್ನೂ ಮಾಡಲು ಭಗವಂತ ಸಮರ್ಥನಾಗಿದ್ದಾನೆ.

**ಪುಷ್ಪಗಳೇ ಪರಮಾತ್ಮನ ಮಂದಹಾಸದ ಸಂಕೇತ**

ಇದರ ಸೂಚನೆ ಪರಮಾತ್ಮನ ಸೃಷ್ಟಿಯಲ್ಲಿ ನಮಗೆ ಕಾಣಲು ಸಿಗುತ್ತದೆ ಎಂಬುದಾಗಿ ವಿಷ್ಣುಸಹಸ್ರನಾಮ ತಿಳಿಸುತ್ತದೆ -

**'ಪುಷ್ಪಹಾಸಃ ಪ್ರಜಾಗರಃ'** ಭಗವಂತ ಇಡೀ ವಿಶ್ವದ ಸೃಷ್ಟ್ಯಾದಿಗಳನ್ನು ಮಾಡಿದ್ದರೂ ಹೇಗೆ ಇರುತ್ತಾನೆ ? ಎಂದರೆ, ನಗುನಗುತಾ ಇರುತ್ತಾನಂತೆ. ನಗುನಗುತಾ ಇರುತ್ತಾನೆ ಎಂಬುದಾಗಿ ಶ್ರುತಿ-ಸ್ಮೃತಿಗಳು, ಪುರಾಣಗಳು ಹೇಳುತ್ತವೆ, ನಾವು ಕೇಳಬೇಕಷ್ಟೇ. ಹೊರತು ನಮಗೆ ಅದು ಕಾಣಿಸುವುದಿಲ್ಲ. ನಿಜ. ಭಗವಂತನನ್ನು ನಾವು ಕಂಡಿಲ್ಲ. ಅವನನ್ನು ಕಾಣುವುದಕ್ಕಾಗಿಯೇನೇ ಇಷ್ಟೆಲ್ಲ ಸಾಧನೆ ಮಾಡುತ್ತಿರುವುದು. ಸತ್ಯವೇ. ಆದರೆ ಆ ಭಗವಂತನ ಮಂದಹಾಸವನ್ನು ಜಗತ್ತಿನಲ್ಲಿ ಉತ್ತಮಸುಗಂಧವನ್ನು ಸೂಸುವ ಪುಷ್ಪಗಳಲ್ಲಿ ತಿಳಿದುಕೊಳ್ಳಬಹುದಾಗಿದೆ. ಕಾರಣ ಅವನು ''ಪುಷ್ಪಹಾಸ''. ಪುಷ್ಪಗಳೇ ಪರಮಾತ್ಮನ ಮಂದಹಾಸದ ಸಂಕೇತ. ಇಡೀ ವಿಶ್ವದ ಸೃಷ್ಟ್ಯಾದಿಗಳನ್ನು ಮಾಡಿದರೂ ನನಗೆ ಕಿಂಚಿತ್ತೂ ಚಿಂತೆ ಇಲ್ಲ, ಸ್ವಲ್ಪವೂ ಶ್ರಮ ಇಲ್ಲ, ನಾನು

ನಿಶ್ಚಿಂತನಾಗಿದ್ದೇನೆ ಎಂದು ಸೂಚನೆ ಮಾಡುವುದಕ್ಕೆ ಪರಮಾತ್ಮ ಪುಷ್ಪಗಳ ಮೂಲಕ ತನ್ನ ಹಾಸವನ್ನು ತೋರುತ್ತಾನೆ. ಆ ಹಾಸದ ಮೂಲಕ ತನಗಾದ ಆನಂದದ ಅಭಿವ್ಯಕ್ತಿಯನ್ನು ಮಾಡುತ್ತಾನೆ ದೇವರು.

ಆ ಹಿನ್ನಲೆಯಲ್ಲಿ ಪರಮಾತ್ಮನ ಪಾದಗಳಲ್ಲಿ ಪುಷ್ಪಗಳನ್ನು ಸಮರ್ಪಣೆ ಮಾಡುವಾಗ ನಾವು ಮಾಡಬೇಕಾದ ಅನುಸಂಧಾನ ಏನೆಂದರೆ -

ಅನಂತವಾದ ಶಕ್ತಿ, ಇಡೀ ಜಗತ್ತಿನ ಸೃಷ್ಟ್ಯಾದಿಗಳನ್ನು ನಿರಂತರವಾಗಿ ಮಾಡಿದರೂ ನಗುನಗುತಾ ಇರುವ ವ್ಯಕ್ತಿತ್ವ ನಿನ್ನದು. ಅಂತಹ ನಿನ್ನ ಆನಂದವೇ ನಮ್ಮೆಲ್ಲರ ಬದುಕಿಗೆ ಕಾರಣ. ನಿನಗೇ ಶ್ರಮವಾಗಿ, ಚಿಂತೆಯಿಂದ ಸುಮ್ಮನೆ ಕೂತುಬಿಟ್ಟಿದ್ದರೆ ನಮ್ಮ ಗತಿ ಏನಾಗುತ್ತಿತ್ತು ? ಇಂದು ನಾವೆಲ್ಲ ಬದುಕಿದ್ದೇವೆ ಎಂದರೆ ಅದಕ್ಕೆ ನಿನ್ನ ಉತ್ಸಾಹ ಕಾರಣ. ನಿನ್ನ ಉತ್ಸಾಹ, ನಿನ್ನ ನಗು, ನಿನ್ನ ಆನಂದ ಅದು ವಿಶ್ವದ ಅಸ್ತಿತ್ವಕ್ಕೆ ಕಾರಣ. ನಮ್ಮ ಬದುಕಿಗೆ ಕಾರಣ. ಅಂತಹ ಅನಂತಶಕ್ತಿ ಸಂಪನ್ನನಾದ ನಿನ್ನ ಪಾದಗಳಲ್ಲಿ ಪುಷ್ಪಗಳನ್ನು ಸಮರ್ಪಿಸುತ್ತಿದ್ದೇನೆ ಎಂಬ ಅನುಸಂಧಾನ ನಮ್ಮ ಮನಸ್ಸಿನಲ್ಲಿ ಮೂಡಬೇಕು.

★★★

 

## ಪುಷ್ಪಹಾಸ - ೨

*ಸರ್ವಕರ್ಮಫಲಪ್ರದನಾದ ಆ ಭಗವಂತ ನಮ್ಮ ಕರ್ಮಗಳಿಂದ ಸಂತುಷ್ಟನಾಗಬೇಕು. ನಮ್ಮ ಕರ್ಮಗಳನ್ನು ನೋಡಿ ಮಂದಹಾಸ ಬೀರಬೇಕು.*

*ಭಗವಂತ ಮಂದಹಾಸ ತೋರಿದರೆ ನಮ್ಮ ಕರ್ಮ ಸಾರ್ಥಕವಾಗುವುದರಲ್ಲಿ, ನಮ್ಮ ಎಲ್ಲ ದುಃಖಗಳ ನಿವಾರಣೆಯಾಗಿ ಸಮಸ್ತಾಭೀಷ್ಟಪ್ರಾಪ್ತಿಯಾಗುವದರಲ್ಲಿ ಸಂದೇಹವಿಲ್ಲ.*

ಜೊತೆಗೆ - **ಪೋಷಣಾತ್ ಪುಷ್ಪನಾಮಾ ತ್ವಂ**

ಎಂಬುದಾಗಿ ಹೇಳಿದಂತೆ, ನಮ್ಮೆಲ್ಲರ ಪೋಷಣೆ ಮಾಡುತ್ತಾನಾದ್ದರಿಂದ ಭಗವಂತನಿಗೆ ಪುಷ್ಪ ಎಂದು ಕರೆಯುವಂತೆ, ಭಗವಂತನ ಮಂದಹಾಸಕ್ಕೂ ಪುಷ್ಪ ಎಂದು ಹೆಸರು. ಪರಮಾತ್ಮನ ಹಾಸ ಅದು ಪುಷ್ಪ ಏಕೆ ? ಎಂದರೆ, ನಮ್ಮ ಕಷ್ಟಗಳನ್ನೆಲ್ಲ ಪರಿಹರಿಸಿ ನಮಗೆ ಪುಷ್ಟಿಯನ್ನು ಕೊಡುವುದು ಪರಮಾತ್ಮನ ಹಾಸ.

### ನಮ್ಮ ಕರ್ಮಗಳಿಂದ ದೇವರು ಸಂತೋಷಪಡಬೇಕು

ನಾವು ಬೇಕಾದಷ್ಟು ಕರ್ಮಗಳನ್ನು ಮಾಡುತ್ತೇವೆಯಾದರೂ ಮಾಡಿದ ಕರ್ಮಗಳನ್ನು ನೋಡಿ ಸಂತುಷ್ಟನಾಗಿ ದೇವರು ಫಲ ಕೊಟ್ಟರೆ ಮಾತ್ರ ಮಾಡಿದ ಕರ್ಮಗಳು ಸಾರ್ಥಕ. ಮಾಡಿದ

ಕರ್ಮಗಳಿಂದ ದೇವರು ಸಂತುಷ್ಟನಾಗಲಿಲ್ಲ ಎಂದರೆ, ಕರ್ಮಗಳು ನಿರರ್ಥಕ. ನಾವು ಮಾಡಿದ ಕರ್ಮಗಳನ್ನು ಗುರುಗಳು, ವಾಯುದೇವರು, ಭಗವಂತ ನೋಡಿ ಸಂತುಷ್ಟರಾಗಿ ಅನುಗ್ರಹ ಮಾಡಿದರೆ ಮಾತ್ರ ಕರ್ಮಗಳು ಫಲಪ್ರದವಾಗುತ್ತವೆ. ಸ್ವತಂತ್ರವಾಗಿ ಕರ್ಮಗಳು ಫಲಪ್ರದವಾಗುವುದಿಲ್ಲ. ಕಾರಣ ಕರ್ಮಗಳು ಜಡ. ಹಾಗಾದರೆ ಭಗವಂತನೇ ನಮ್ಮ ಕರ್ಮಗಳನ್ನು ನೋಡಿ ಸಂತೋಷಪಟ್ಟು ಫಲ ಕೊಡಬೇಕು. ಅವನು ನಕ್ಕರೆ, ಅವನು ಮಂದಹಾಸ ಬೀರಿದರೆ ಕರ್ಮಗಳು ಫಲಪ್ರದವಾಗುತ್ತವೆ. ನಮಗೆ ಪುಷ್ಟಿ ಸಿಗುತ್ತದೆ.

ಜನ್ಮಾಂತರದಲ್ಲಿ ನಾವು ಜಲದಾನ ಮಾಡಿದ್ದರೆ, ಭಗವಂತ ಇಂದು ನಮಗೆ ನೀರು ಕೊಡುತ್ತಾನೆ. ಅನ್ನದಾನ ಮಾಡಿದ್ದರೆ ಇಂದು ನಮಗೆ ಊಟ ಕೊಡುತ್ತಾನೆ. ವಸ್ತ್ರದಾನ ಮಾಡಿದ್ದರೆ ಇಂದು ನಮಗೆ ವಸ್ತ್ರ ಕೊಡುತ್ತಾನೆ. ಹಾಗಾದರೆ ಜನ್ಮಾಂತರದಲ್ಲಿ ಮಾಡಿದ ಕರ್ಮಗಳೇ ನಮಗೆ ನೇರವಾಗಿ ಫಲ ಕೊಡುವುದಿಲ್ಲ. ಆ ಕರ್ಮಗಳನ್ನು ನೋಡಿ ದೇವರು ಹಾಸ ಮಾಡಬೇಕು. ''ನಿನ್ನ ಕರ್ಮ ನೋಡಿ ಸಂತೋಷವಾಯಿತು'' ಎಂಬುದಾಗಿ ದೇವರು ಪ್ರಸನ್ನನಾಗಿ ಮಂದಹಾಸ ಬೀರಿದರೆ, ಆಗ ಕರ್ಮಗಳಿಂದ ನಮಗೆ ಫಲ ಸಿಗುತ್ತದೆ. ಕರ್ಮಫಲವಾಗಿ ಅನ್ನ, ವಸ್ತ್ರ, ನೀರು, ಗಾಳಿ, ಬೆಳಕು, ಸ್ಥಳ, ಪರಿವಾರ, ಪರಿಸರ ಎಲ್ಲ ಸಿಕ್ಕರೆ ನಮಗೆ

ಪುಷ್ಟಿ ಸಿಗುತ್ತದೆ. ಹಾಗಾಗಿ ನಮಗೆ ಪುಷ್ಟಿಯನ್ನು ನೀಡುವುದು ಅದು ದೇವರ ಮಂದಹಾಸ.

**ಸಜ್ಜನರ ಕಣ್ಣೀರು ಒಣಗಿಸುವ ಮಂದಹಾಸ**

ದೇವರ ಈ ಮಂದಹಾಸದ ಮಹಿಮೆಯನ್ನು ದೇವರ ಬಾಯಿಯಲ್ಲಿಯೇ ಕೇಳಬೇಕು. ತೃತೀಯಸ್ಕಂಧದಲ್ಲಿ ಕಪಿಲನಾಮಕ ಪರಮಾತ್ಮನು ತಾಯಿಯಾದ ದೇವಹೂತಿಯನ್ನು ಕೂಡಿಸಿಕೊಂಡು ಉಪದೇಶ ಮಾಡುವಾಗ, ಧಾರಣಾ ಅವಸ್ಥೆಯಲ್ಲಿ ತನ್ನ ಒಂದೊಂದೇ ಅವಯವಗಳ ಚಿಂತನ ಹೇಗೆ ಮಾಡಬೇಕೆಂದು ತಿಳಿಸುತ್ತಾ, ತನ್ನ ಮಂದಹಾಸದ ಬಗ್ಗೆ ತಿಳಿಸಿಕೊಡುತ್ತಾನೆ -

**ಹಾಸಂ ಹರೇರವನತಾಖಿಲಲೋಕತೀವ್ರ-**
**ಶೋಕಾಶ್ರುಸಾಗರವಿಶೋಷಣಮತ್ಯುದಾರಮ್ ।**
**ಸಂಮೋಹನಾಯ ರಚಿತಂ ನಿಜಮಾಯಯಾಸ್ಯ**
**ಭ್ರೂಮಂಡಲಂ ಮುನಿಸುತೇ ಮಕರಧ್ವಜಸ್ಯ ॥**

**(ಭಾಗ 3-29-31)**

ತನ್ನೆದುರಿಗೆ ಬಂದು ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿದ ಸಜ್ಜನರ ಕಣ್ಣೀರಿನ ಸಮುದ್ರವನ್ನು ಒಣಗಿಸುವ ಮಂದಹಾಸ ನನ್ನದು ಎಂಬುದಾಗಿ ಸ್ವತಃ ದೇವರೇ ಹೇಳಿಕೊಳ್ಳುತ್ತಾನೆ.

**ಕರ್ಮಗಳನ್ನು ಕಂಡು ಭಗವಂತ ಸಂತೋಷಪಡಬೇಕು**

ನಾವು ಕರ್ಮಗಳನ್ನು ಮಾಡಿ ''ಬಹಳ ಚೆನ್ನಾಗಿ ಕರ್ಮ ಮಾಡಿದ್ದೇನೆ'' ಎಂಬುದಾಗಿ ನಾವೇ ಪ್ರಶಸ್ತಿಪತ್ರ ಕೊಟ್ಟುಕೊಂಡರೆ ಏನೂ ಉಪಯೋಗವಿಲ್ಲ. ನಾವು ಮಾಡುವ ಕರ್ಮಗಳನ್ನು ಕಂಡು ಸಂತೋಷಪಟ್ಟು ಫಲ ಕೊಡುವವನು ಭಗವಂತನಾದ್ದರಿಂದ

**ಕುರ್ವತೇ ಕರ್ಮ ಯತ್ಪ್ರೀತಯೇ ಸಜ್ಜನಾಃ ।**

ಎಂಬ ಆಚಾರ್ಯರ ಆದೇಶದಂತೆ ಆ ಪರಮಾತ್ಮನ ಪ್ರೀತಿಗಾಗಿ ಕರ್ಮಗಳನ್ನು ಮಾಡಬೇಕು. ಸರ್ವತ್ರ ವ್ಯಾಪ್ತನಾದ, ಅಂತೆಯೇ ಸರ್ವಕರ್ಮಸಾಕ್ಷಿಯಾದ, ಸರ್ವಕರ್ಮಫಲಪ್ರದನಾದ ಆ ಭಗವಂತ ನಮ್ಮ ಕರ್ಮಗಳಿಂದ ಸಂತುಷ್ಟನಾಗಬೇಕು. ನಮ್ಮ ಕರ್ಮಗಳನ್ನು ನೋಡಿ ಮಂದಹಾಸ ಬೀರಬೇಕು.

**ಅಥವಾ ಜ್ಞಾನಿಗಳು ಸಂತುಷ್ಟರಾಗಬೇಕು**

ಒಂದು ವಿಚಾರವನ್ನು ನಾವು ತಿಳಿಯಬೇಕಾದದ್ದೆಂದರೆ, ನಮ್ಮ ಕರ್ಮಗಳನ್ನು ಪ್ರತ್ಯಕ್ಷವಾಗಿ ದೇವರು ನೋಡುತ್ತಾನಾದರೂ, ಪ್ರತ್ಯಕ್ಷವಾಗಿ ಬಂದು ನಮಗೆ ಮಂದಹಾಸ ಬೀರುವುದಿಲ್ಲ. ನಾವು ಕರ್ಮಗಳನ್ನು ಮಾಡಿದಾಗ ದೇವರ ಪ್ರತಿಮೆ ಬಾಯಿ ತೆರೆದು ನಗುವುದಿಲ್ಲ. ಅಂದಮೇಲೆ

ನಮ್ಮ ಕರ್ಮಗಳಿಂದ ದೇವರಿಗೆ ಸಂತೋಷವಾಗಿದೆ ಎಂದು ನಾವು ಹೇಗೆ ತಿಳಿದುಕೊಳ್ಳುವುದು ? ಎಂಬುದಾಗಿ ಗೊಂದಲಕ್ಕೆ ಈಡಾಗುವುದು ಬೇಡ.

**''ಜ್ಞಾನೀ ತ್ವಾತ್ಮೈವ ತೇ ಮತಮ್''**

**'ಅಹಂ ಸರ್ವೇಷು ಭೂತೇಷು ಭೂತಾತ್ಮಾऽವಸ್ಥಿತಃ ಸದಾ'**

ಎಂಬ ಮಾತಿನಂತೆ, ಭಗವಂತ ಜ್ಞಾನಿಗಳಲ್ಲಿ ತನ್ನ ವಿಶೇಷ ಸನ್ನಿಧಾನ ಇಟ್ಟಿರುತ್ತಾನಾದ್ದರಿಂದ, ಜ್ಞಾನಿಗಳೇ ಭಗವಂತನ ಚಲಪ್ರತಿಮೆಗಳಾದ್ದರಿಂದ ''ಶಾಸ್ತ್ರೋಕ್ತಕ್ರಮದಿಂದ ಉತ್ತಮವಾಗಿ ಕರ್ಮಗಳನ್ನು ಮಾಡಿದ್ದಿ. ಯಾವುದೇ ಲೋಪ-ದೋಷಗಳಾಗಿಲ್ಲ. ನಿನ್ನ ಕರ್ಮಾಚರಣೆಯಿಂದ ನಮಗೆ ಸಂತೋಷವಾಗಿದೆ'' ಎಂಬುದಾಗಿ ಜ್ಞಾನಿಗಳು ಹೇಳಿದರೆ, ಶಾಸ್ತ್ರಾನುಗುಣವಾಗಿ ನಡೆದದ್ದನ್ನು ಕಂಡು ಶಾಸ್ತ್ರಜ್ಞರು ಸಂತೋಷಪಟ್ಟರೆ, ಜ್ಞಾನಿಗಳು ಪ್ರಶಂಸೆ ಮಾಡಿದರೆ ಆಗ ಭಗವಂತನೇ ನಿಜವಾಗಿ ಸಂತೋಷಪಟ್ಟಂತೆ. ಭಗವಂತನೇ ಪ್ರಶಂಸೆ ಮಾಡಿದಂತೆ.

ಹೊರತು ಕೇವಲ ಆಡಂಬರವನ್ನು ನೋಡಿ, ವೈಭವವನ್ನು ಕಂಡು ''ಬಹಳ ವೈಭವದಿಂದ ಕರ್ಮಗಳನ್ನು ಮಾಡಿದ್ದಿ. ತುಂಬ ಚೆನ್ನಾಗಿ ಆಯಿತು'' ಎಂಬುದಾಗಿ ಬೇರೆ ಯಾರೋ ಹೇಳಿದರೆ ಪ್ರಯೋಜನವಿಲ್ಲ.

**ಕರ್ಮಗಳಿಗೆ ಸಾರ್ಥಕತೆ ಸೂಚಿಸುವ ಮಂದಹಾಸ**

ಹಾಗಾದರೆ, ನಾವು ಮಾಡುವ ಕರ್ಮಗಳು ನಮಗೆ ಫಲಪ್ರದವಾಗಬೇಕಾದರೆ, ಸರ್ವತ್ರ ವ್ಯಾಪ್ತನಾದ, ಅಂತೆಯೇ ಸರ್ವಕರ್ಮಸಾಕ್ಷಿಯಾದ, ಸರ್ವಕರ್ಮಫಲಪ್ರದನಾದ ಆ ಭಗವಂತ ನಮ್ಮ ಕರ್ಮಗಳಿಂದ ಸಂತುಷ್ಟನಾಗಬೇಕು. ನಮ್ಮ ಕರ್ಮಗಳನ್ನು ನೋಡಿ ಮಂದಹಾಸ ಬೀರಬೇಕು.

ಭಗವಂತ ಮಂದಹಾಸ ತೋರಿದರೆ ನಮ್ಮ ಕರ್ಮ ಸಾರ್ಥಕವಾಗುವುದರಲ್ಲಿ, ನಮ್ಮ ಎಲ್ಲ ದುಃಖಗಳ ನಿವಾರಣೆಯಾಗಿ ಸಮಸ್ತಾಭೀಷ್ಟಪ್ರಾಪ್ತಿಯಾಗುವದರಲ್ಲಿ ಸಂದೇಹವಿಲ್ಲ.

ಅಂತಹ ಮಂದಹಾಸ ಉಳ್ಳ ನಿನ್ನ ಪಾದಾರವಿಂದಗಳಲ್ಲಿ ಪುಷ್ಪಗಳನ್ನು ಸಮರ್ಪಿಸುತ್ತಿದ್ದೇನೆ ಎಂಬ ಅನುಸಂಧಾನದಿಂದ, ಪರಮಾತ್ಮನ ಆ ಮಂದಹಾಸವನ್ನು, ಮಂದಹಾಸದ ಮಹತ್ವವನ್ನು ನೆನೆಯುತ್ತಾ ಭಗವಂತನ ಪಾದಕಮಲಗಳಿಗೆ ಪುಷ್ಪಗಳನ್ನು ಏರಿಸಬೇಕು.

★★★



## ಪುಷ್ಪಹಾಸ - ೩

ಪುಷ್ಪವನ್ನು ಅರ್ಪಿಸಿದ್ದಕ್ಕಾಗಿ ಮೊಸಳೆಯ ಬಂಧನದಿಂದ ಗಜೇಂದ್ರನನ್ನು ರಕ್ಷಿಸಿದಂತೆ,

ನಿತ್ಯ ಪುಷ್ಪಸಮರ್ಪಣೆ ಮಾಡುವುದರಿಂದ ಅನ್ನ-ವಸ್ತ್ರಾದಿಗಳನ್ನು ಕೊಟ್ಟು ಎಲ್ಲವಿಧವಾದ ಬಂಧನಗಳಿಂದ ನಮ್ಮನ್ನೂ ಭಗವಂತ ರಕ್ಷಣೆ ಮಾಡುತ್ತಾನೆ.

ಭಗವಂತನಿಗೆ ಪ್ರತಿನಿತ್ಯ ಪುಷ್ಪಗಳನ್ನು ಸಮರ್ಪಿಸುವುದರಿಂದ ವಿಶೇಷವಾಗಿ ಅನ್ನಪ್ರಾಪ್ತಿಯಾಗುತ್ತದೆ, ಶ್ವೇತರಾಜ ಮಾಲೆಯನ್ನು ಅರ್ಪಿಸಿದ್ದಕ್ಕಾಗಿ ಅವನ ಹಸಿವೆಯನ್ನು ನೀಗಿಸಿ, ಯಥೇಚ್ಛವಾಗಿ ಅನ್ನವನ್ನು ಕರುಣಿಸಿದ ಎಂಬುದಾಗಿ ಈ ಹಿಂದೆ ತಿಳಿದಿದ್ದೇವೆ.

ಯಾವ ರೀತಿಯಾಗಿ ಅನ್ನವಿಲ್ಲದ ಶ್ವೇತರಾಜ ಭಗವಂತನಿಗೆ ಪುಷ್ಪವನ್ನು ಸಮರ್ಪಣೆ ಮಾಡಿದ್ದಕ್ಕಾಗಿ ಅವನಿಗೆ ಅನ್ನವನ್ನು ಕೊಟ್ಟು ಭಗವಂತ ವಿಶೇಷವಾಗಿ ಅನುಗ್ರಹ ಮಾಡಿದ, ಅದೇ ರೀತಿಯಾಗಿ ಗಜೇಂದ್ರನೂ ಭಕ್ತಿಯಿಂದ ಕೇವಲ ಪುಷ್ಪವನ್ನು ಕೊಟ್ಟಿದ್ದಕ್ಕಾಗಿ ಅವನನ್ನೂ ಬಂಧಮುಕ್ತಗೊಳಿಸಿದ.

**ಉತ್ಕ್ಷಿಪ್ಯ ಸಾಂಬುಜಕರಂ ಗಿರಮಾಹ ಕೃಚ್ಛ್ರಾತ್**
**ನಾರಾಯಣಾಖಿಲಗುರೋ ಭಗವನ್ನಮಸ್ತೇ ॥**

(ಭಾಗ 8-3-30)

ಸರೋವರದಲ್ಲಿ ಮೊಸಳೆ ಗಜೇಂದ್ರನ ಕಾಲನ್ನು ಘಟ್ಟಿಯಾಗಿ ಹಿಡಿದುಕೊಂಡಿದ್ದಕ್ಕಾಗಿ ಭಗವಂತನಿಗೆ ಸಮರ್ಪಿಸಲು ಅವನ ಬಳಿ ಏನೂ ಇರಲಿಲ್ಲ. ಹೀಗಾಗಿ ಅಲ್ಲಿಯೇ ಸರೋವರದಲ್ಲಿ ಬೆಳೆದಿದ್ದ ಕಮಲಪುಷ್ಪವನ್ನು ಸೊಂಡಿಲಿನಿಂದ ಕಿತ್ತಿ ಭಕ್ತಿಯಿಂದ ಭಗವಂತನ ಪಾದಕಮಲಗಳಿಗೆ ಸಮರ್ಪಣೆ ಮಾಡಿದ ಗಜೇಂದ್ರ.

**ಪತ್ರಂ ಪುಷ್ಪಂ ಫಲಂ ತೋಯಂ**
**ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಂ**
**ಅಶ್ನಾಮಿ ಪ್ರಯತಾತ್ಮನಃ ॥**

ಎಂಬುದಾಗಿ ಭಗವಂತನೇ ಹೇಳಿದಂತೆ, ಆರ್ದ್ರಮನಸ್ಕನಾಗಿ ಭಕ್ತಿಯಿಂದ ಕೇವಲ ಒಂದು ಪುಷ್ಪವನ್ನು ಕೊಟ್ಟಿದ್ದಷ್ಟೇ ಗಜೇಂದ್ರ. ಭಗವಂತನ ಗುಣಗಳನ್ನು ಚಿಂತಿಸುತ್ತಾ, ಹೂವನ್ನು ಸಮರ್ಪಣೆ ಮಾಡಿದ್ದು ಬಿಟ್ಟರೆ ಬೇರೆ ಏನನ್ನೂ ಮಾಡಲಿಲ್ಲ. ಬೇರೆ ಏನು ಮಾಡಲೂ ಸಾಧ್ಯವೂ ಇರಲಿಲ್ಲ. ಭಕ್ತಿಯಿಂದ ಹೂವನ್ನು ಅರ್ಪಿಸಿ ಪ್ರಾರ್ಥಿಸಿದ್ದಕ್ಕಾಗಿ ಭಗವಂತ ಎಷ್ಟು ಅನುಗ್ರಹ ಮಾಡಿದ ?

**ಒಂದು ಸಾವಿರವರ್ಷಗಳವರೆಗೆ ಯುದ್ಧ !**

ಈ ಮೊಸಳೆ ಮತ್ತು ಗಜೇಂದ್ರ ಇಬ್ಬರೂ ಕದನ ಮಾಡಿದ್ದು ಒಂದು ದಿನವಲ್ಲ, ಎರಡು ದಿನವಲ್ಲ. ಒಂದು ಸಾವಿರ ವರ್ಷ

ಕದನವಾಡಿದ್ದಾರೆ. ಒಂದು ಸಾವಿರ ವರ್ಷ ಕಳೆದರೂ ಯಾರೂ ಸೋಲುತ್ತಿಲ್ಲ. ಮೊಸಳೆಯನ್ನು ಸೋಲಿಸಿ ಸಂಹರಿಸಲು ಗಜೇಂದ್ರನಿಗೆ ಆಗುತ್ತಿಲ್ಲ. ಆನೆಯನ್ನು ಪೂರ್ಣವಾಗಿ ನೀರಿನಲ್ಲಿ ಸೆಳೆದುಕೊಳ್ಳಲು ಮೊಸಳೆಗೂ ಆಗುತ್ತಿಲ್ಲ. ಆ ರೀತಿಯಾಗಿ ನಿಂತಲ್ಲಿಯೇ ನಿಂತು ಒಂದು ಸಾವಿರ ವರ್ಷಗಳವರೆಗೆ ಇಬ್ಬರೂ ಕದನವಾಡುತ್ತಿದ್ದಾರೆ.

ಇವರಿಬ್ಬರ ದೀರ್ಘಕಾಲದ ಯುದ್ಧವನ್ನು ಕಂಡು ದೇವತೆಗಳಿಗೆ ಆಶ್ಚರ್ಯವಾಗಿದೆ. ನಿಜವಾಗಿ ನೋಡಿದರೆ ಇವರಿಬ್ಬರೂ ದೇವತೋತ್ತಮರೂ ಅಲ್ಲ. ದೇವತೆಗಳೂ ಅಲ್ಲ. ದೇವಾನುಗರಾದ ಹಾಹಾ ಹೂಹೂ ಎಂಬ ಗಂಧರ್ವರು. ದೇವಸಭೆಗಳಲ್ಲಿ ಹಾಡುವ ಗಾಯಕರು. ಅಂತಹ ದೇವಲೋಕದಲ್ಲಿ ಹಾಡುವ ಗಾಯಕರಿಗೇ ಇಷ್ಟು ಒಂದು ಸಾವಿರವರ್ಷ ಉಪವಾಸವಿದ್ದು ಕಾದಾಡುವ ಶಕ್ತಿ ಇದ್ದಮೇಲೆ ಇನ್ನು ದೇವತೆಗಳಿಗೆ ಎಷ್ಟು ಶಕ್ತಿ ಇರಬೇಕು ? ಊಹಿಸಿಕೊಳ್ಳಬೇಕು !

### ಭಕ್ತಿಯಿಂದ ಹೂವು ಕೊಟ್ಟಿದ್ದಕ್ಕೆ ಬಂಧಮುಕ್ತಗೊಳಿಸಿದ

ಹಾಗಾದರೆ ಮೊಸಳೆಯ ಜೊತೆ ಒಂದು ಸಾವಿರ ವರ್ಷ ಸತತವಾಗಿ ಯುದ್ಧವಾಡಿ ಅಂತಿಮವಾಗಿ ಭಗವಂತನನ್ನು ಶರಣು ಹೋದ ಗಜೇಂದ್ರ, ಭಕ್ತಿಯಿಂದ ಪರಮಾತ್ಮನ

ಗುಣಾನುಸಂಧಾನಪೂರ್ವಕವಾಗಿ ಭಗವಂತನಿಗೆ ಒಂದೇಒಂದು ಕಮಲಪುಷ್ಪವನ್ನು ಸಮರ್ಪಣೆ ಮಾಡಿದ್ದಕ್ಕೆ -

**ಛಂದೋಮಯೇನ ಗರುಡೇನ ಸಮುಹ್ಯಮಾನಃ**
**ಚಕ್ರಾಯುಧೋಽಭ್ಯಗಮದಾಶು ಯತೋ ಗಜೇಂದ್ರಃ।**
**ಸಗ್ರಾಹಮಾಶು ಸರಸಃ ಕೃಪಯೋಜ್ಜಹಾರ .....**

**(ಭಾಗ 8-3-29, 31)**

ಭಗವಂತ ಗರುಡಾರೂಢನಾಗಿ ವೈಕುಂಠದಿಂದ ಧಾವಿಸಿಬಂದು, ಸುದರ್ಶನಚಕ್ರದಿಂದ ಮೊಸಳೆಯನ್ನು ಸಂಹರಿಸಿ, ಮೊಸಳೆಯ ಬಂಧನದಿಂದ ಗಜೇಂದ್ರನನ್ನು ಬಿಡುಗಡೆ ಮಾಡಿ, ಉದ್ಧಾರ ಮಾಡಿದ.

ಕೇವಲ ಮೊಸಳೆಯ ಬಂಧನದಿಂದ ಮಾತ್ರ ಬಿಡುಗಡೆ ಮಾಡಿದ್ದಲ್ಲ. ಕಿಂತು ಗಜಯೋನಿಯಿಂದ (ಆನೆಯ ಜನ್ಮದಿಂದಲೂ ಅವನನ್ನು ಉದ್ಧರಿಸಿ ಅವನನ್ನು ಮೂಲರೂಪಕ್ಕೆ (ಗಂಧರ್ವಲೋಕಕ್ಕೆ) ಸೇರಿಸಿದ.

ಇದರಿಂದ ನಾವು ತಿಳಿಯುವುದೇನು ? ನಾವೂ ಸಹ ನಿತ್ಯದಲ್ಲಿ ಭಕ್ತಿಯಿಂದ ವಿಷ್ಣುಸಹಸ್ರನಾಮಗಳನ್ನು ಪಠನ ಮಾಡುತ್ತಾ ಭಗವಂತನಿಗೆ ಪುಷ್ಪಗಳನ್ನು ಸಮರ್ಪಿಸಿದರೆ ಭಗವಂತ ನಮ್ಮನ್ನೂ ಬಂಧಮುಕ್ತಗೊಳಿಸುತ್ತಾನೆ.

**ನಾವೂ ಗಜೇಂದ್ರರೇ.**
**ನಾವೂ ಮೊಸಳೆಯ ಬಂಧನದಲ್ಲಿದ್ದೇವೆ**

ನಮಗೆ ಯಾವ ಮೊಸಳೆಯೂ ಹಿಡಿದಿಲ್ಲ ? ನಾವೇನು ಗಜೇಂದ್ರರೇ ? ಇದು ನಮಗೆ ಸಂಬಂಧಿಸಿದ್ದಲ್ಲ ಎಂದುಕೊಳ್ಳಬೇಡಿ.

**ಪುತ್ರಾದಿನಕ್ರನಿಗೃಹೀತಕರಸ್ಯ ..**
**ವಾಸಿಷ್ಟಕೃಷ್ಣ ಮಮ ದೇಹಿ ಕರಾವಲಂಬಮ್ ॥**

ಎಂಬುದಾಗಿ ಯಾದವಾರ್ಯರು ಪ್ರಾರ್ಥನೆ ಮಾಡಿಕೊಂಡಂತೆ, ಸಂಸಾರದಲ್ಲಿ ಹೆಂಡತಿ-ಮಕ್ಕಳು-ಬಂಧುಗಳು ಇತ್ಯಾದಿಯಾಗಿ ಏನು ನಾನಾತರಹದ ಬಂಧನಗಳಿವೆ ಅವುಗಳೇ ನಮಗೆ ದೊಡ್ಡ ಮೊಸಳೆ. ಅಂತಹ ಪುತ್ರಾದಿರೂಪವೊಸಳೆಯ ಬಂಧನಕ್ಕೆ ಸಿಕ್ಕಿಕೊಂಡು ಒದ್ದಾಡುತ್ತಿದ್ದೇವೆ ನಾವು.

ಅಷ್ಟೇ ಅಲ್ಲದೇ ಆ ಗಜೇಂದ್ರ (ಗಂಧರ್ವ) ತನ್ನದೇ ಆದ ರೂಪವನ್ನು, ವ್ಯಕ್ತಿತ್ವವನ್ನು ಉಳಿಸಿಕೊಳ್ಳಲಾಗದೇ ಆನೆಯ ಯೋನಿಯಲ್ಲಿ ಒದ್ದಾಡುತ್ತಿದ್ದ. ಅದರಂತೆ ನಾವೂ ಸಹ ನಮ್ಮದೇ ಆದ ಆನಂದವನ್ನು, ಜ್ಞಾನ-ರೂಪ-ಓಜಸ್ಸುಗಳನ್ನು ಅನುಭವಿಸಲಿಕ್ಕಾಗದೇ ಈ ಭೌತಿಕದೇಹಗಳಲ್ಲಿ ಒದ್ದಾಡುತ್ತಿದ್ದೇವೆ. ದೊಡ್ಡ ಗಂಧರ್ವ ಆನೆಯ ದೇಹದಲ್ಲಿ ಒದ್ದಾಡಿದಂತೆ

ಉತ್ತಮಜೀವಸ್ವರೂಪ ಹೊಂದಿದ ನಾವು ಈ ತುಚ್ಛವಾದ ದೇಹದಲ್ಲಿ ಒದ್ದಾಡುತ್ತಿದ್ದೇವೆ.

ಹಾಗಾಗಿ ಆನೆಯ ದೇಹದಲ್ಲಿ ಒದ್ದಾಡುತ್ತಿದ್ದ ಗಜೇಂದ್ರನನ್ನು ಭಗವಂತ ಉದ್ಧಾರ ಮಾಡಿದಂತೆ, ಭೌತಿಕದೇಹದಲ್ಲಿ ಒದ್ದಾಡುತ್ತಿರುವ ನಮ್ಮನ್ನೂ ಭಗವಂತ ಉದ್ಧರಿಸಬೇಕಿದೆ.

ಆದರೆ ವ್ಯತ್ಯಾಸ ಇಷ್ಟೇ. ಗಜೇಂದ್ರ ಅವನು ದೊಡ್ಡ ಗಂಧರ್ವ. ಹೀಗಾಗಿ ಒಂದುಬಾರಿ ಒಂದೇಹೂವನ್ನು ಅತ್ಯಂತ ಪಕ್ವಭಕ್ತಿಯಿಂದ ಭಗವಂತನಿಗೆ ಸಮರ್ಪಣೆ ಮಾಡಿ ಕೃತಾರ್ಥನಾದ.

ನಾವು ಅವನಂತೆ ಗಂಧರ್ವರೂ ಅಲ್ಲ. ಅವನಂತೆ ದೊಡ್ಡ ಯೋಗ್ಯತೆಯೂ ನಮ್ಮದಲ್ಲ. ಆದರೆ ಯಾವುದಾದರೂ ಸತ್ಕಾರ್ಯಕ್ಕೆ ಡೊನೇಷನ್ ಕೊಡುವಾಗ ಅಷ್ಟೂ ದುಡ್ಡನ್ನು ಒಂದೇಬಾರಿ ಕೊಡುವ ಶಕ್ತಿ ಇಲ್ಲದಿದ್ದಾಗ ಪ್ರತಿತಿಂಗಳು ಕಂತು-ಕಂತುಗಳಲ್ಲಿ ಕೊಟ್ಟು ಮುಗಿಸುವಂತೆ,

ನಮಗೆ ಗಜೇಂದ್ರನಷ್ಟು ದೊಡ್ಡಮಟ್ಟದಲ್ಲಿ ಭಕ್ತಿಯನ್ನು ಒಮ್ಮೆಲೇ ಮಾಡುವ ಯೋಗ್ಯತೆ ಇಲ್ಲ. ಆದ್ದರಿಂದ ಪ್ರತಿನಿತ್ಯವೂ ಸ್ವಲ್ಪ ಸ್ವಲ್ಪ ಹೂವುಗಳನ್ನು ಸ್ವಲ್ಪ ಸ್ವಲ್ಪ ಭಕ್ತಿಯಿಂದ ಸಮರ್ಪಿಸುತ್ತಾ ಸಮರ್ಪಿಸುತ್ತಾ ಹೋಗೋಣ. ಭಗವಂತ

ನಿಧಾನವಾಗಿ ನಮ್ಮ ಬಂಧನಗಳನ್ನು ಕಳಚುತ್ತಾ ಕಳಚುತ್ತಾ, ಗಜೇಂದ್ರನನ್ನು ಉದ್ಧರಿಸಿ ರಕ್ಷಣೆ ಮಾಡಿದಂತೆ, ಇಂದಲ್ಲ ನಾಳೆ ಒಂದುಬಾರಿ ಭಗವಂತ ನಮ್ಮನ್ನೂ ಉದ್ಧರಿಸಿ ರಕ್ಷಣೆ ಮಾಡುತ್ತಾನೆ.

ಹಾಗಾದರೆ, ಪುಷ್ಪವನ್ನು ಸಮರ್ಪಿಸಿದ್ದಕ್ಕಾಗಿ

★ ಅನ್ನ ಕೊಟ್ಟು ಶ್ವೇತರಾಜನನ್ನು ರಕ್ಷಣೆ ಮಾಡಿದಂತೆ,

★ ಮೊಸಳೆಯ ಬಂಧನದಿಂದ ಗಜೇಂದ್ರನನ್ನು ರಕ್ಷಿಸಿದಂತೆ,

★ ಅನ್ನ-ವಸ್ತ್ರಾದಿಗಳನ್ನು ಕೊಟ್ಟು ಎಲ್ಲವಿಧವಾದ ಬಂಧನಗಳಿಂದ ನಮ್ಮನ್ನೂ ಭಗವಂತ ರಕ್ಷಣೆ ಮಾಡುತ್ತಾನೆ ಎಂಬ ಅನುಸಂಧಾನವನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಭಕ್ತಿ-ಶ್ರದ್ಧೆಗಳಿಂದ ಎಲ್ಲರೂ ಭಗವಂತನಿಗೆ ಪುಷ್ಪಾರ್ಚನೆಯನ್ನು ಮಾಡೋಣ.

★★★



* ಪ್ರತಿನಿತ್ಯ ದೇವಪೂಜಾಕಾಲದಲ್ಲಿ ಪರಮಾತ್ಮನಿಗೆ ಪುಷ್ಪಗಳನ್ನು ಸಮರ್ಪಿಸುವಾಗ ಏನೇನು ಅನುಸಂಧಾನಗಳನ್ನು ಮಾಡಬೇಕು ?

* ದೇವಪೂಜೆಗಾಗಿ ಹೂವುಗಳನ್ನು ಸಿದ್ಧಪಡಿಸುವಾಗ ಏನೇನು ನಿಯಮಗಳನ್ನು ಪಾಲಿಸಬೇಕು?



* ಪರಮಾತ್ಮನಿಗೆ 'ಪುಷ್ಪಹಾಸ' ಎಂದು ಏಕೆ ಕರೆಯುತ್ತಾರೆ ? 'ಪುಷ್ಪಹಾಸ' ಎಂಬುವ ಹೆಸರಿನ ಹಿನ್ನೆಲೆಯಲ್ಲಿ ಎಷ್ಟು ಮಹತ್ವದ ವಿಚಾರಗಳಿವೆ ?





ಈ ಎಲ್ಲ ಉತ್ತಮ ವಿಚಾರಗಳನ್ನು ಒಳಗೊಂಡು 'ಪುಷ್ಪಹಾಸ' ಕೃತಿ ಹೊರಹೊಮ್ಮಿದೆ











